ಸಂಪುಟ ೧೯ ಸಂಚಿಕೆ ೧

ಮಾರ್ಚ್ ೧೯೯೮

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20

ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)

ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಭಾರತೀಯ ಸ್ಟೇಟ್ ಬ್ಯಾಂಕ್ ಮರುಸಂಘಟನೆ: ಮೆಕೆನ್ಸೀ ವರದಿ

**ಎಸ್. ಸೀತಾರಾಮು**

ಸಹಾಯಕ ಪ್ರಧಾನ ವ್ಯವಸ್ಥಾಪಕರು, ಭಾರತೀಯ ಸ್ಟೇಟ್ ಬ್ಯಾಂಕ್, ವಿದೇಶ ವ್ಯವಹಾರ ಶಾಖೆ, ಬೆಂಗಳೂರು ೫೬೦ ೦೦೧

ಪರಿಸರದಲ್ಲಾಗುವ ಬದಲಾವಣೆ ಮತ್ತು ಅದರ ಫಲವಾದ ಒತ್ತಡಗಳಿಗೆ ಆಗಾಗಲೇ ಯುಕ್ತ ಹೊಂದಾಣಿಕೆಗಳನ್ನು ಮಾಡಿಕೊಂಡು, ತನ್ನ ಸಾಂಸ್ಥಿತ ಧ್ಯೇಯಸಾಧನೆಯ ಹಾದಿಯಲ್ಲಿ ಮುನ್ನಡೆಯಬಯಸುವ ಭಾರತೀಯ ಸ್ಟೇಟ್ ಬ್ಯಾಂಕು ಈ ಉದ್ದೇಶ ಸಾಧಿಸಲು ಮೆಕೆನ್ಸೀ ಕಂಪನಿಯಿಂದ ಪಡೆದ ಸಲಹೆ; ಅವುಗಳ ಜಾರಿ.

ಯಾವುದೇ ಒಂದು ವಾಣಿಜ್ಯ ಸಂಸ್ಥೆ ತನ್ನ ಪರಿಸರದಲ್ಲಾಗುವ ಬದಲಾವಣೆ ಮತ್ತು ಅದರಿಂದುಂಟಾಗುವ ಒತ್ತಡಗಳಿಗೆ ಸೂಕ್ತವಾದ ಹೊಂದಾಣಿಕೆಗಳನ್ನು ಮಾಡಿಕೊಳ್ಳದಿದ್ದರೆ ಅದರ ಅಸ್ತಿತ್ವಕ್ಕೇ ಸಂಚಕಾರ ಉಂಟಾಗುತ್ತದೆ. ಇದನ್ನೇ ಖ್ಯಾತ ತಜ್ಞ ಪೀಟರ್ ಡ್ರೆಕರ್‌ರವರು "ಆವಿಷ್ಕರಿಸು ; ಇಲ್ಲವೆ ಮಡಿ" ಎಂಬ ಸೂಕ್ತಿಯಲ್ಲಿ ಹೇಳಿದ್ದಾರೆ. ಪರಿಸರದಲ್ಲಿನ ಬದಲಾವಣೆ ಆರ್ಥಿಕ, ರಾಜಕೀಯ, ಸಾಮಾಜಿಕ, ತಾಂತ್ರಿಕ ಯಾವುದೇ ರೀತಿಯಾದರೂ ಅದು ತನ್ನ ಪ್ರಭಾವವನ್ನು ಬೀರೇ ತೀರುತ್ತದೆ. ಉದಾಹರಣೆಗೆ ಯಾವುದೇ ಉದ್ಯಮದಲ್ಲಿನ ತಾಂತ್ರಿಕತೆ ಬೆಳೆಯುತ್ತಿದ್ದಂತೆ ಹಳೆಯ ತಾಂತ್ರಿಕತೆ ಉಳ್ಳ ಘಟಕಗಳು ಹೊಸ ತಾಂತ್ರಿಕತೆಯುಳ್ಳ ಘಟಕಗಳೊಡನೆ ಸ್ಪರ್ಧಿಸಲು ಕಷ್ಟಪಡಬೇಕಾಗುತ್ತದೆ.

ನಮ್ಮ ದೇಶದಲ್ಲಿ 1991ರ ಅನಂತರ ಜಾರಿಗೆ ಬಂದ ಹೊಸ ಆರ್ಥಿಕ ನೀತಿ ದೇಶದಲ್ಲಿ ಆರ್ಥಿಕ ಚಿಂತನೆಯ ದಿಶೆಯನ್ನೆ ಬದಲಾಯಿಸಿ ಬಿಟ್ಟಿತು. ಆರ್ಥಿಕ ಕ್ಷೇತ್ರದ ಮೇಲೆ, ಅದರಲ್ಲೂ ಬ್ಯಾಂಕಿಂಗ್ ಕ್ಷೇತ್ರದ ಮೇಲೆ ಅದರ ಪ್ರಭಾವ ವಿಶೇಷವಾಗಿ ಆಯಿತು. ಬ್ಯಾಂಕುಗಳ ಕಾರ್ಯಕ್ಷಮತೆ ಮತ್ತು ಆರೋಗ್ಯವನ್ನು ಉತ್ತಮ ಪಡಿಸಲು ಜಾರಿಗೆ ತಂದ ನೀತಿ ನಿಯಮಗಳು, ಹೊಸ ಖಾಸಗಿ ಹಾಗೂ ವಿದೇಶಿ ಬ್ಯಾಂಕುಗಳ ಪ್ರವೇಶದಿಂದ ಹೆಚ್ಚಿದ ಸ್ಪರ್ಧೆ, ಬಂಡವಾಳ ಮಾರುಕಟ್ಟೆಯಲ್ಲಿನ ಬದಲಾವಣೆಯಿಂದಾಗಿ ಉದ್ಯಮಗಳು ಈ ಮಾರುಕಟ್ಟೆಯಿಂದ ನೇರವಾಗಿ ತಮಗೆ ಬೇಕಾದ ಬಂಡವಾಳವನ್ನು ಪಡೆಯುವಂತಾದ್ದು ಗ್ರಾಹಕರಿಗೆ ಲಭ್ಯವಾದ ಹೂಡಿಕೆ ಪರ್ಯಾಯಗಳು ಮುಂತಾದ ಬದಲಾವಣೆಗಳ ಬಿಸಿ ನಮ್ಮ ದೇಶದ ಬ್ಯಾಂಕುಗಳ ದೊಡ್ಡಣ್ಣ ಭಾರತೀಯ ಸ್ಟೇಟ್ ಬ್ಯಾಂಕಿಗೂ ತಟ್ಟದಿರಲಿಲ್ಲ. ತನ್ನ ಸಂಸ್ಥಾಧ್ಯೇಯದಂತೆ ಭಾರತೀಯ ಆರ್ಥಿಕ ಸೇವಾ ಸಮುದಾಯದಲ್ಲಿ ಅಗ್ರಸ್ಥಾನವನ್ನು ಉಳಿಸಿಕೊಂಡು ಜಾಗತಿಕ ಮಟ್ಟವನ್ನು ಹೊಂದಿ, ತನ್ನ ಅಭಿವೃದ್ಧಿ ಬ್ಯಾಂಕಿಂಗ್ ಪಾತ್ರದ ಬಗ್ಗೆ ಪ್ರಾಧಾನ್ಯ ನೀಡುತ್ತಾ, ತನ್ನ ಗ್ರಾಹಕ ಠೇವಣಿದಾರ ಮತ್ತು ಉದ್ಯೋಗಿಗಳ ಸಂತೃಪ್ತಿಗಾಗಿ ಸಮರ್ಪಿಸಿಕೊಂಡು, ವೈವಿಧ್ಯಮಯವಾಗಿ ವಿಸ್ತಾರಗೊಳ್ಳುತ್ತಿರುವ ಆರ್ಥಿಕ ಕ್ಷೇತ್ರದ ಈ ಮಹತ್ತರ ಬದಲಾವಣೆಗಳಿಗೆ ಅತಿ ಶೀಘ್ರವಾಗಿ ಸ್ಪಂದಿಸಿ ಸೂಕ್ತ ಮಾರ್ಪಾಟುಗಳನ್ನು ಮಾಡುವ ಆವಶ್ಯಕತೆಯನ್ನು ಕಂಡುಕೊಂಡಿತು. ಮತ್ತು ಈ ಕೆಲಸವನ್ನು ಸಮರ್ಪಕವಾಗಿ ಮಾಡಲು ಅಂತರರಾಷ್ಟ್ರೀಯ ಖ್ಯಾತಿಯ ವ್ಯವಸ್ಥಾ ಸಲಹೆಗಾರ ಸಂಸ್ಥೆಯಾದ ಮೆಕೆನ್‌ಸೀ ಕಂಪೆನಿಯ ಸಲಹೆಯನ್ನು 1995ರಲ್ಲಿ ಪಡೆಯಿತು.

ವಾಸ್ತವಿಕತೆಯ ಪರಿಜ್ಞಾನ ಹಾಗೂ ಆತ್ಮಶೋಧನೆ ಫಲಕಾರಿ ಬದಲಾವಣೆಯ ಮೂಲವಾಗಿರುತ್ತದೆ. ಈ ದಿಶೆಯಲ್ಲಿ ಮೆಕೆನ್ಸೀ ಕಂಪನಿ ಇಟ್ಟ ಮೊದಲ ಹೆಜ್ಜೆ ಎಂದರೆ ಭಾರತೀಯ ಸ್ಟೇಟ್ ಬ್ಯಾಂಕಿನ ಅಧ್ಯಯನ, ಬ್ಯಾಂಕಿನ ಕಾರ್ಯವೈಖರಿ ಮತ್ತು ಅದರ ಗ್ರಾಹಕ ಸೇವಾಕ್ಷಮತೆಯ ಬಗ್ಗೆ ಬ್ಯಾಂಕಿನ ವಿವಿಧ ಸ್ತರಗಳ ಉದ್ಯೋಗಿಗಳನ್ನು ಸಂದರ್ಶಿಸಿ ಹಾಗು ಗ್ರಾಹಕರ ನಿರೀಕ್ಷೆ, ಬೇಕು-ಬೇಡಗಳ ಬಗ್ಗೆ ಅಭಿಪ್ರಾಯ ಸಂಗ್ರಹಣೆಮಾಡಿ, ಬ್ಯಾಂಕಿನ ಪದ್ಧತಿ ಹಾಗೂ ಕಾರ್ಯರೀತಿಗಳ ಅಧ್ಯಯನ ಮಾಡಿ ಕೆಲವೊಂದು ಮುಖ್ಯ ಅಂಶಗಳನ್ನ ಕಂಡುಕೊಂಡಿತು. ಅವೆಂದರೆ:

1 ಬ್ಯಾಂಕಿನ ವಾಣಿಜ್ಯಗ್ರಾಹಕರು, ಈ ಬ್ಯಾಂಕಿನಲ್ಲಿ ಗ್ರಾಹಕರಿಗೆ ಅಗ್ರಮಾನ್ಯತೆ ಇಲ್ಲದಿರುವುದರಿಂದ, ಪರ್ಯಾಯಗಳನ್ನು ಹುಡುಕಲು ತಯಾರಿರುವುದು.

2 ಸಾಲ ಮಂಜೂರು ಕ್ರಮ ಬಹುಸ್ತರದ್ದಾಗಿದ್ದು, ಹೆಚ್ಚು

ಸಮಯ ತೆಗೆದುಕೊಳ್ಳುತ್ತಿದ್ದುದರಿಂದ ಸಾಲ ವಿತರಣೆ ನಿಧಾನವಾಗಿದ್ದು, ಗ್ರಾಹಕರಿಗೆ ವಿಳಂಬವಾಗುತ್ತಿತ್ತು.

3 ಜೊತೆಗೆ ಬ್ಯಾಂಕಿನ ಸಾಂಪ್ರದಾಯಿಕ ಶಕ್ತಿಕ್ಷೇತ್ರವಾದ ಠೇವಣಿ ಸಂಗ್ರಹಣೆಯಲ್ಲಿ ತನ್ನ ಮಾರುಕಟ್ಟೆ ಪಾಲನ್ನು ಕಳೆದುಕೊಳ್ಳುತ್ತಿರುವುದು.

4 ಶೀಘ್ರವಾಗಿ ವಿಸ್ತಾರಗೊಳ್ಳುತ್ತಿರುವ ಅರ್ಥವ್ಯವಸ್ಥೆಯಿಂದಾಗಿ ಸಣ್ಣ ಮತ್ತು ಮಧ್ಯಮ ಮಾರುಕಟ್ಟೆ ಗ್ರಾಹಕರ ಆವಶ್ಯಕತೆಗಳನ್ನು ಪೂರೈಸುವಲ್ಲಿ ಕಂಡುಬರುತ್ತಿರುವ ಆಕರ್ಷಕ ಅವಕಾಶಗಳು.

ಈ ಮೇಲೆ ತಿಳಿಸಿದ ಕೆಲವು ನ್ಯೂನತೆಗಳನ್ನು ಹೋಗಲಾಡಿಸಿ ಅವಕಾಶಗಳನ್ನು ಉಪಯೋಗಿಸಿಕೊಂಡು, ತನ್ನ ಸಂಸ್ಥಾಧ್ಯೇಯವನ್ನು ಸಾಧಿಸಬೇಕಾದರೆ, ಬ್ಯಾಂಕಿನಲ್ಲಿ ಒಂದು ಆಮೂಲಾಗ್ರವಾದ ಬದಲಾವಣೆಯು ಅಗತ್ಯವಿದೆ ಎಂಬ ನಿರ್ಧಾರಕ್ಕೆ ಮೆಕೆನ್ಸೀಯವರು ಬಂದರು. ಅದರಂತೆ ಅವರು ತಮ್ಮ ಸಲಹಾ ವರದಿಯಲ್ಲಿ ಬ್ಯಾಂಕಿನಲ್ಲಿ ಆಗಬೇಕಾದ ಬದಲಾವಣೆಗಳನ್ನು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಿದರು.

ಅವೆಂದರೆ :

1 ಸಂಸ್ಥಾ ವಿನ್ಯಾಸ, 2 ಕುಶಲೋಪಾಯಗಳು 3 ಪದ್ಧತಿಗಳು ಹಾಗು ಕಾರ್ಯರೀತಿ.

## ಸಂಸ್ಥಾ ವಿನ್ಯಾಸ

ಹಿಂದೆ 1972ರಲ್ಲಿ ಬ್ಯಾಂಕಿನ ಮರುವ್ಯವಸ್ಥೆಯಾದಾಗ ಅದರ ಕಾರ್ಯಕ್ಷೇತ್ರವನ್ನು ಸ್ಥೂಲವಾಗಿ ಎರಡು ಭಾಗವಾಗಿ ಪರಿಯೋಜನೆ ಹಾಗೂ ವ್ಯವಹಾರ ಎಂದು ವಿಂಗಡಿಸಲಾಗಿತ್ತು. ನಂತರದ ಸುಮಾರು ಇಪ್ಪತ್ತೈದು ವರ್ಷಗಳಲ್ಲಿ ಈ ಬಗೆಯ ವಿಂಗಡಣೆಯ ಉಪಲಬ್ಧಗಳ ಬಗ್ಗೆ ಬಹಳ ಚರ್ಚೆ ನಡೆಯುತ್ತಲೇ ಬಂದಿತ್ತು. ವ್ಯವಹಾರಕ್ಕಿಂತ ಪರಿಯೋಜನೆಯ ಅಗ್ರಮಾನ್ಯತೆಯ ಆವಶ್ಯಕತೆಯ ಬಗ್ಗೆ ಪ್ರಶ್ನೆಗಳು ಏಳುತ್ತಲೇ ಇದ್ದವು. ಮೆಕೆನ್ಸೀ ಇಂತಹ ಒಂದು ವಿಂಗಡಣೆಯ ಆವಶ್ಯಕತೆ ಇಲ್ಲವೆಂದೇ ತಿಳಿಸುತ್ತಾ, ಸಂಸ್ಥಾ ಮರುವಿನ್ಯಾಸದ ತಮ್ಮ ಸೂಚನೆಯಲ್ಲಿ ಬ್ಯಾಂಕಿನ ಸಂಸ್ಥಾ ಕೇಂದ್ರವು ಸಪೂರವಾಗಿರಬೇಕು ಹಾಗೂ ಅದರಲ್ಲಿನ ಮುಖ್ಯ ಸ್ಥಾನಗಳು ಬ್ಯಾಂಕಿನ ಇತರ ಸ್ತರಗಳಲ್ಲಿ ನಡೆಯುವ ಕೆಲಸಗಳನ್ನು ಸಮಗ್ರಗೊಳಿಸುವ ಜವಾಬ್ದಾರಿಯಿಂದ ಕೂಡಿರಬೇಕು ಎಂದು ತಿಳಿಸಿದರು. ಈ ಸೂಚನೆಯಂತೆ ಭಾರತೀಯ ಸ್ಟೇಟ್ ಬ್ಯಾಂಕಿನ ಮುಂಬೈನಲ್ಲಿರುವ ಕೇಂದ್ರ ಕಛೇರಿಯನ್ನು ಐದು ವಿಭಾಗಗಳುಳ್ಳ ಸಂಸ್ಥಾ ಕೇಂದ್ರ ಮತ್ತು ಐದು ವ್ಯಾಪಾರ ಸಮುದಾಯಗಳು ಎಂದು ಮರುವಿನ್ಯಾಸ ಮಾಡಿದರು. ಸಂಸ್ಥಾ ಕೇಂದ್ರದ ವಿವಿಧ ಭಾಗಿಗಳು ಹಾಗೂ ಅವುಗಳ ಜವಾಬ್ದಾರಿಯನ್ನು ಹೀಗೆ ಕಾಣಿಸಬಹುದು :




ಮೇಲೆ ತಿಳಿಸಿದ ಸಂಸ್ಥಾ ಕೇಂದ್ರ ವಿನ್ಯಾಸದ ಪರಿಟಾಯೆಯಾಗಿ ಅಂದರೆ ಕೇಂದ್ರದಲ್ಲಿನ ಮುಖ್ಯ ಆರ್ಥಿಕ ಅಧಿಕಾರಿಯ ಜಾಗದಲ್ಲಿ ವೃತ್ತ ಕಛೇರಿ, ವಲಯ ಕಛೇರಿ ಮತ್ತು ವಲಯ ಕಛೇರಿಯಲ್ಲಿನ ಕ್ಷೇತ್ರೀಯ ಕಛೇರಿಗಳನ್ನು ಹೆಚ್ಚು ಕಡಿಮೆ ಈ ತತ್ವದ ಮೇಲೆ ಮರು ವಿನ್ಯಾಸ ಮಾಡಲಾಯಿತು. ವ್ಯಾಪಾರ ಸಮುದಾಯಗಳ ವಿಂಗಡಣೆಯಂತೆ ವೃತ್ತದಲ್ಲಿನ ಶಾಖೆಗಳನ್ನು ವಾಣಿಜ್ಯ ಜಾಲ ಹಾಗೂ ಅಭಿವೃದ್ಧಿ ಮತ್ತು ವೈಯಕ್ತಿಕ ಬ್ಯಾಂಕಿಂಗ್ ಶಾಖೆಗಳು ಎಂದು ವಿಂಗಡಿಸಲಾಯಿತು.

## ಕುಶಲೋಪಾಯಗಳು

ಸಂಸ್ಥಾ ಮರು ವಿನ್ಯಾಸದ ಜೊತೆಗೆ ಬ್ಯಾಂಕಿನ ಧ್ಯೇಯೋದ್ದೇಶಗಳನ್ನು ಸಾಧಿಸಲು ಬೇಕಾಗುವ ಕುಶಲೋಪಾಯಗಳನ್ನು ಗುರ್ತಿಸುತ್ತಾ ಮೆಕೆನ್ಸೀ ವರದಿ ಕೆಳಗೆ ತಿಳಿಸಿರುವ ಎರಡು ಮುಖ್ಯ ಸೂಚನೆಗಳನ್ನು ಮಾಡಿತು :

1 ಬ್ಯಾಂಕಿನ ವಿವಿಧ ಗ್ರಾಹಕ ಗುಂಪುಗಳು ಮತ್ತು ವ್ಯಾಪಾರಗಳ ಆವಶ್ಯಕತೆಗಳನ್ನು ನೋಡಿಕೊಳ್ಳಲು ತಕ್ಕ ವ್ಯಾಪಾರ ಸಮುದಾಯಗಳ ನಿರ್ಮಾಣ ಮತ್ತು

2 ಈ ಎಲ್ಲ ವ್ಯಾಪಾರ ಸಮುದಾಯಗಳು ಹಾಗೂ ಅವುಗಳಲ್ಲಿನ ವ್ಯಾಪಾರ ಘಟಕಗಳು ಲಾಭ ಕೇಂದ್ರಗಳಾಗಿ ಕೆಲಸ ಮಾಡಬೇಕು.

ಪ್ರತಿಯೊಂದು ವ್ಯಾಪಾರ ಸಮುದಾಯವೂ ತನ್ನದೇ ಆದ ಗ್ರಾಹಕರನ್ನು ಹೊಂದಿದ್ದು, ಅವರಿಗೆ ಬ್ಯಾಂಕ್ ಕೊಡಲಿಚ್ಛಿಸುವ ಮೌಲ್ಯಾಭಿಧಾನ ಹಾಗೂ ಆ ಗ್ರಾಹಕರ ಆವಶ್ಯಕತೆಗಳಿಗೆ ತಕ್ಕಹಾಗೆ ಸೇವೆಯನ್ನು ಪೂರೈಸಲು ಆ ವ್ಯಾಪಾರ ಸಮುದಾಯದಲ್ಲಿ ಸ್ಥಾಪಿಸಬೇಕಾದ ವ್ಯಾಪಾರ ಘಟಕಗಳ ವಿವರವನ್ನು ಅನುಬಂಧದಲ್ಲಿ ನೀಡಿದೆ.

## ಪದ್ಧತಿಗಳು ಹಾಗೂ ಕಾರ್ಯರೀತಿ

ಸಂಸ್ಥಾ ಮರು ವಿನ್ಯಾಸ, ಕುಶಲೋಪಾಯಗಳ ಜೊತೆಗೆ ಬ್ಯಾಂಕಿನ ಪದ್ಧತಿಗಳು ಹಾಗೂ ಕಾರ್ಯರೀತಿಗಳಲ್ಲೂ ಸೂಕ್ತ ಮಾರ್ಪಾಟಾಗಬೇಕೆಂದು ಮಕೆನ್ಸೀ ವರದಿ ತಿಳಿಸಿತು. ಗ್ರಾಹಕ ಸೇವೆ ಸಮೀಕ್ಷೆಯಿಂದ ಮೆಕೆನ್ಸೀ ಕಂಡುಕೊಂಡ ಒಂದು ಬಹು ಮುಖ್ಯ ಅಂಶವೆಂದರೆ ಬ್ಯಾಂಕಿನಲ್ಲಿ ಸಾಲ ಮಂಜೂರಿ ಹಾಗೂ ವಿತರಣೆಯಲ್ಲಾಗುತ್ತಿದ್ದ ವಿಳಂಬ ; ಇದನ್ನ ಸರಿಪಡಿಸಲು ಮತ್ತು ಬ್ಯಾಂಕಿನ ವ್ಯಾಪಾರ ಘಟಕಗಳ ಸಾಧನಾ ನಿರ್ವಹಣೆಯನ್ನು ಸಮರ್ಪಕವಾಗಿ ಮಾಡಲು ಬ್ಯಾಂಕಿನ ಪದ್ಧತಿಗಳು ಮತ್ತು ಕಾರ್ಯರೀತಿಯಲ್ಲಿ ಕೆಳಗಿನ ಬದಲಾವಣೆಗಳನ್ನು ಸೂಚಿಸಿತು :

1 ಬಹುಸ್ತರವಾಗಿರುವ ಸಾಲ ಮಂಜೂರು ಮತ್ತು ವಿತರಣಾ ರೀತಿಯನ್ನು ನಿಸ್ತರಗೊಳಿಸುವುದು ಅಂದರೆ ಒಂದು ಸಾಲದ ಪ್ರಸ್ತಾವ ಶಾಖೆಯಿಂದ ಹೊರಟು ವಲಯ ಕಛೇರಿ, ಸ್ಥಳೀಯ ಪ್ರಧಾನ ಕಛೇರಿಯಲ್ಲಿ ವಿವಿಧ ಸ್ತರಗಳಲ್ಲಿ ಬೇರೆಬೇರೆ ಅಧಿಕಾರಿಗಳು, ಮತ್ತೆ ಮತ್ತೆ ನೋಡಿ ಕೊನೆಗೆ ಮಂಜೂರು ಮಾಡುವ ಅಧಿಕಾರಿಗೆ ಕಳಿಸುವುದರಿಂದ ಬಹಳಷ್ಟು ಸಮಯದ ಉಳಿತಾಯವಾಗಿ ವಿಳಂಬ ಕಮ್ಮಿಯಾಗುವುದು.

2 ದೊಡ್ಡ ಸಾಲಗಳನ್ನು ಕೇವಲ ಒಬ್ಬನೇ ಅಧಿಕಾರಿ ಮಂಜೂರು ಮಾಡುವ ಬದಲು ಒಂದು ಸಮಿತಿ ಮಾಡುವುದು. ಇದರಿಂದ ಮಂಜೂರಾತಿಯ ಹೊಣೆ ಒಬ್ಬನೇ ಅಧಿಕಾರಿಯ ಮೇಲಿರದೆ, ಸಮಿತಿಯ ಸದಸ್ಯರೆಲ್ಲರ ಅನುಭವ, ಜ್ಞಾನ, ಉಪಯೋಗವಾಗುವುದರಿಂದ, ವಿಶ್ಲೇಷಣೆ ಹೆಚ್ಚು ಸಮರ್ಪಕವಾಗಿದ್ದು ಪ್ರಸ್ತಾವ ಬೇಗ ಮಂಜೂರಾಗಲು ಸಾಧ್ಯವಾಗುವುದು. ಈ ಸೂಚನೆಯಂತೆ ಈಗ ಬ್ಯಾಂಕಿನ ಕೇಂದ್ರ ಕಛೇರಿಯಲ್ಲಿ, ಕೇಂದ್ರ ಕಛೇರಿ ಸಾಲ ಸಮಿತಿ ಹಾಗೂ ವೃತ್ತಗಳಲ್ಲಿ ವೃತ್ತ ಸಾಲ ಸಮಿತಿಗಳು ಕೆಲಸ ಮಾಡುತ್ತಿವೆ. ವೃತ್ತದ ಮುಖ್ಯ ಪ್ರಧಾನ ವ್ಯವಸ್ಥಾಪಕರು, ಪ್ರಧಾನವ್ಯವಸ್ಥಾಪಕರು (ವಾಣಿಜ್ಯ ಬ್ಯಾಂಕಿಂಗ್) ಮತ್ತು ಪ್ರಧಾನವ್ಯವಸ್ಥಾಪಕರು (ಅಭಿವೃದ್ಧಿ ಬ್ಯಾಂಕಿಂಗ್) ವೃತ್ತಸಾಲ ಸಮಿತಿಯ ಸದಸ್ಯರಾಗಿದ್ದು ಆ ಸಮಿತಿಯ ಕಾರ್ಯನಿರ್ವಹಣೆಯನ್ನು ವೃತ್ತ ಸಾಲ ಅಧಿಕಾರಿ ಮಾಡುತ್ತಾರೆ.

3 ಪ್ರತಿಯೊಂದು ವ್ಯಾಪಾರ ಸಮುದಾಯವೂ ತನ್ನದೇ ಆದ ಪ್ರತ್ಯೇಕ ಮೌಲ್ಯ ಮಾಪನಾ ಪದ್ಧತಿಯನ್ನು ಹೊಂದಿರಬೇಕು. ಏಕೆಂದರೆ ಈ ನಾಲ್ಕು ವ್ಯಾಪಾರ ಸಮುದಾಯಗಳ ಕಾರ್ಯ ಪರಿಸರ ಬೇರೆಬೇರೆಯಾಗಿರುತ್ತದೆ. ಈ ಸೂಚನೆಯ ಅನುಷ್ಠಾನವನ್ನು ಬ್ಯಾಂಕಿನಲ್ಲಿ ಮಾಡಬೇಕಾಗಿದೆ.

4 ಸಾಧನ ನಿರ್ವಹಣೆಯನ್ನು ಲಾಭ ಅಂದಾಜು ಮಾಡುವ ಮೂಲಕ ಮಾಡಬೇಕು. ಬ್ಯಾಂಕಿನಲ್ಲಿ ಈವರೆಗೆ ಕೇವಲ ವ್ಯಾಪಾರ ಅಭಿವೃದ್ಧಿಯ ಅಂದಾಜು ಮಾಡಲ್ಪಡುತ್ತಿದ್ದು, ಲಾಭದ ಮೇಲೆ ಹೆಚ್ಚು ಒತ್ತಡವಿರಲಿಲ್ಲ. ಆದರೆ ಮರುವಿನ್ಯಾಸದ ನಂತರ ಪ್ರತಿಯೊಂದು ವ್ಯಾಪಾರ ಘಟಕವೂ ಲಾಭ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಬೇಕಾದುದರಿಂದ ಅವುಗಳ ಸಾಧನ ನಿರ್ವಹಣೆಯನ್ನು ಲಾಭ ಅಂದಾಜು ಮಾಡಿ ನಡೆಸುವುದು ಹೆಚ್ಚು ಸೂಕ್ತ.

ಮೆಕೆನ್ಸೀ ಕಂಪನಿ ಸಲ್ಲಿಸಿದ ವರದಿಯನ್ನು ಬ್ಯಾಂಕ್ ಕೂಲಂಕಷವಾಗಿ ಅಧ್ಯಯನ ಮಾಡಿ ಅದರ ಬಹುತೇಕ ಸಲಹೆಗಳನ್ನು ಅಕ್ಟೋಬರ್ 1995ರಿಂದ ಬ್ಯಾಂಕಿನ ಅಹಮದಾಬಾದ್ ಮತ್ತು ಮದರಾಸ್ ವೃತ್ತಗಳಲ್ಲಿ ಪರೀಕ್ಷಾರ್ಥ ಜಾರಿಗೆ ತಂದಿತು. ಅನಂತರ ಫೆಬ್ರವರಿ 1996ರಿಂದ ಉಳಿದ ಎಲ್ಲಾ ವೃತ್ತಗಳಲ್ಲೂ ಜಾರಿಗೆ ತಂದಿತು. ಈ ಎರಡು ವರ್ಷಗಳಲ್ಲಿ ಹೊಸ ಕಾರ್ಯ ಪದ್ಧತಿ ವಿಧಾನ, ವಿನ್ಯಾಸಗಳು ಸ್ಥಿರಗೊಂಡಿದ್ದು. ಹಲವು ನಿರೀಕ್ಷಿತ ಫಲಗಳು ದೊರಕಿವೆ. ಸಾಲ ಮಂಜೂರು ಮತ್ತು ವಿತರಣೆಯ ವಿಳಂಬ ಸಾಕಷ್ಟು ಕಡಿಮೆಯಾಗಿದೆ, ಬ್ಯಾಂಕಿನ ನೂರು ಅತಿ ದೊಡ್ಡ ಕಂಪೆನಿ ಗ್ರಾಹಕರ ಆವಶ್ಯಕತೆಯನ್ನು ಸಮರ್ಪಕವಾಗಿ ಪೂರೈಸಲಾಗುತ್ತಿದೆ. ಆದರೂ ಬ್ಯಾಂಕಿನ ಸಿಬ್ಬಂದಿನೀತಿ, ಶಾಖಾ ವಿಸ್ತರಣೆ, ವಿವಿಧ ವ್ಯಾಪಾರ ಸಮುದಾಯ, ಘಟಕಗಳ ಸಾಧನಾ ವಿಶ್ಲೇಷಣೆಯ ಮೇಲೆ ಈ ಪ್ರಯೋಗದ ಪೂರ್ಣ ಪ್ರಭಾವ ತಿಳಿಯಲು ಇನ್ನೂ ಸ್ವಲ್ಪ ಸಮಯ ಹಿಡಿಯುತ್ತದೆ,



# ಬ್ಯಾಂಕ್ ಉದ್ಯೋಗದಲ್ಲಿ ಮಾನಸಿಕ ನೆಮ್ಮದಿಯ ಪಾತ್ರ

**ಬಾಪೂರಾವ್ ಸುಬೇದಾರ್**

ಕೃಷ್ಣಾ ಗ್ರಾಮೀಣ ಬ್ಯಾಂಕ್, ಪ್ರಧಾನ ಕಛೇರಿ, ಗುಲಬರ್ಗಾ 585 103

---

**ತಮ್ಮ ಉದ್ಯೋಗಿಗಳು ಯಂತ್ರದೊಂದಿಗೆ ಯಂತ್ರವಾಗಿ ಕೆಲಸ ಮಾಡಬೇಕೆಂದು ಉದ್ಯೋಗ ಪತಿಗಳು ಭಾವಿಸಿದ್ದ ಕಾಲವೊಂದಿತ್ತು. ಆದರೆ ಈಗ ಕಾಲ ಬದಲಾಗಿದೆ. ತೃಪ್ತ ಸಿಬ್ಬಂದಿಯೇ ಸಂಸ್ಥೆಯ ಯಶಸ್ಸಿನ ಗುಟ್ಟು. ಸಿಬ್ಬಂದಿಯ ಕಲ್ಯಾಣ ಸಾಧನೆಯೇ ಅವರ ಪ್ರಥಮ ಆದ್ಯತೆ.**

---

ಬ್ಯಾಂಕ್ ಉದ್ಯೋಗಿ ಎಂದೊಡನೆಯೇ ಸರ್ವರೀತಿಯಿಂದಲೂ ಸೌಲಭ್ಯವಿರುವ ಕಟ್ಟಡದಲ್ಲಿ ಉತ್ತಮ ಉಡುಪು ಧರಿಸಿ, ಆರಾಮವಾಗಿ ಅಂಕಿ-ಸಂಖ್ಯೆಗಳೊಡನೆ ಸರಸವಾಡುತ್ತ, ಲೆಕ್ಕ ಪತ್ರ ಮಾಡುತ್ತ ಕುಳಿತಿರುವ ಕ್ಲರ್ಕ್, ಕೌಂಟರಿನಲ್ಲಿರುವ ಹಣ ತಮ್ಮದೇ ಎನ್ನುವಂತೆ ಠೀವಿಯಿಂದ ಇರುವ ಕ್ಯಾಷಿಯರ್, ಎಲ್ಲರಿಗೂ ಆದೇಶಿಸುತ್ತ, ಮೇಲ್ವಿಚಾರಣೆ ನಡೆಸುವ ಮ್ಯಾನೇಜರ್ ಹುದ್ದೆಗಳನ್ನು ಹೊಂದಿದ, ತಮ್ಮ ಸಹೋದ್ಯೋಗಿಗಳೊಂದಿಗೆ ಹರಟೆ ಕೊಚ್ಚುತ್ತ ಕುಳಿತಿರುವ ಇತರೆ ಸಿಬ್ಬಂದಿ. ಒಟ್ಟಾರೆ ಅತಿ ಹೆಚ್ಚಿನ ಸೌಲಭ್ಯಗಳನ್ನು ಹೊಂದಿದ, ಹೆಚ್ಚಿನ ವೇತನ ಪಡೆಯುವ, ಠಾಕು-ಠೀಕಾಗಿ ಇರುವ ಉದ್ಯೋಗಿ ಎಂದು ಜನರು ದೃಶ್ಯ ಕಲ್ಪಿಸಿಕೊಳ್ಳುತ್ತಾರೆ.

## ವಾಸ್ತವತೆ

ಜನಸಾಮಾನ್ಯರು ಕಲ್ಪಿಸಿಕೊಳ್ಳುವ ಬ್ಯಾಂಕ್ ಉದ್ಯೋಗಿಯ ದೃಶ್ಯ ಕೆಲ ಸಮಯದಲ್ಲಿ ಕೆಲ ಶಾಖೆ ಮತ್ತು ಕಛೇರಿಗಳಲ್ಲಿ ಸ್ವಲ್ಪ ಮಟ್ಟಿಗೆ ಸರಿಯೆನಿಸಿದರೂ ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ ಎನ್ನುವಂತೆ ಬ್ಯಾಂಕ್ ಉದ್ಯೋಗಿಯ ವಾಸ್ತವತೆ ಬೇರೆಯೆ ಆಗಿದೆ. ಬೆಳಗ್ಗೆಯಿಂದ ಸಾಯಂಕಾಲದ ವರೆಗೂ ಖಾತಾ ಪುಸ್ತಕಗಳಲ್ಲಿ ಮುಖ ಹುದುಗಿಸಿ ಲೆಕ್ಕ ಬರೆಯುವದು, ಪಾಸ್ ಪುಸ್ತಕಗಳಲ್ಲಿ ಲೆಕ್ಕ ನಮೂದಿಸುವದು, ವಿವಿಧ ಇಲಾಖೆಗಳಿಗೆ, ಮೇಲಧಿಕಾರಿಗಳಿಗೆ, ನಿಯಂತ್ರಣ ಕಛೇರಿಗಳಿಗೆ ಪರತಮಾಹಿತಿ (ಸ್ಟೇಟ್‌ಮೆಂಟ್ಸ್) ಕಳಿಸುವದು ; ಸಾಲಗಳಿಗೆ, ಠೇವಣಿಗಳಿಗೆ ಬಡ್ಡಿ ಹಾಕುವದು, ಸಾಲ ವಿತರಣೆ ಮಾಡುವದು, ಎಲ್ಲಾ ಖಾತೆಗಳ ತಾಳೆ (ಬ್ಯಾಲೆನ್ಸಿಂಗ್) ನೋಡುವುದು, ಪ್ರತಿ ದಿನ ನಡೆಯುವ ಹಣ ಕಾಸಿನ ವ್ಯವಹಾರ ತಾಳೆ ಮಾಡುವುದು, ಮೇಲಿಂದಮೇಲೆ ಬರುವ ಹಿರಿಯ ಅಧಿಕಾರಿಗಳ ಆದೇಶ, ನಿಯಂತ್ರಣ ಕಛೇರಿಗಳಿಂದ ತುರ್ತಾಗಿ ಮಾಡಲು ಬರುವ ತಂತಿ ಸಂದೇಶಗಳು ಹಾಗೂ ಇತರೆ ಎಲ್ಲಾ ಕೆಲಸಗಳಿಂದ ಬ್ಯಾಂಕ್ ನೌಕರನ ಉದ್ಯೋಗ ತುಂಬಾ ಗಡಿಬಿಡಿಯಿಂದ ಹಾಗೂ ಅತಿ ಹೆಚ್ಚು ಜವಾಬ್ದಾರಿಯಿಂದ ಕೂಡಿದೆ.

ಇಂದಿನ ಯುಗದಲ್ಲಿ ನಾಗರಿಕತೆ ಬೆಳೆದಂತೆ ಮಾನವನ ಜೀವನ ತುಂಬ ಜಟಿಲವಾಗಿದೆ. ದೊರಕಿದ ಸಮಯದಲ್ಲಿಯೇ ತೀವ್ರ ಗತಿಯಲ್ಲಿ ತಮ್ಮ ಕೆಲಸಗಳನ್ನು ಮಾಡಿಕೊಳ್ಳಬೇಕೆಂಬ ಆಕಾಂಕ್ಷೆ ಹೆಚ್ಚಾಗುತ್ತಿದೆ. ಆದ್ದರಿಂದ ವ್ಯಾಪಾರ ವಹಿವಾಟಿಗಾಗಿ ಬೇಕಾಗುವ ಡಿಮ್ಯಾಂಡ್ ಡ್ರಾಫ್ಟ್ (ತಗಾದೆ ಡ್ರಾಫ್ಟ್) ಬ್ಯಾಂಕರರ ಚೆಕ್, ಬಿಲ್ ವಸೂಲಿ, ಹಣದ ವರ್ಗಾವಣೆ, ವ್ಯಾಪಾರಕ್ಕಾಗಿ ಸಾಲ ಪಡೆಯುವುದು, ಗಳಿಸಿದ ಹಣ ಸುರಕ್ಷಿತವಾಗಿರಲು ಹಾಗೂ ಬಡ್ಡಿ ಗಳಿಸಲು ವಿವಿಧ ಠೇವಣಿಗಳಲ್ಲಿ ಹಣ ತೊಡಗಿಸುವುದು, ಇತರೆ ಎಲ್ಲಾ ಬ್ಯಾಂಕಿಂಗ್ ವ್ಯವಹಾರಗಳು ನವ-ನಾಗರಿಕ ನಿತ್ಯಜೀವನದ ಅವಿಭಾಜ್ಯಅಂಗಗಳಾಗಿವೆ.ದೈನಂದಿನ ಚಟುವಟಿಕೆಗಳಲ್ಲಿಬ್ಯಾಂಕಿಂಗ್ ಉದ್ಯಮ ವಿಶಿಷ್ಟ ಪಾತ್ರ ನಿರ್ವಹಿಸುತ್ತಿದೆ. ಆದ್ದರಿಂದ ಸಹಜವಾಗಿಯೇ ವ್ಯವಹಾರ ಹೆಚ್ಚಾಗಿ ಬ್ಯಾಂಕ್ ಉದ್ಯೋಗಿಗಳಲ್ಲಿ ಕೆಲಸ ಹೆಚ್ಚಾಗಿರುವುದಲ್ಲದೆ.ಅದು ತೀವ್ರವಾಗಿ ಆಗಬೇಕೆಂಬ ಒತ್ತಡದಿಂದ 'ಮಾನಸಿಕ ಒತ್ತಡ' ಜಾಸ್ತಿಯಾಗುತ್ತಿದೆ. ಎಲ್ಲ ಕೆಲಸಗಳನ್ನು ಉತ್ತಮ ಗುಣಮಟ್ಟದೊಂದಿಗೆ ತೀವ್ರವಾಗಿ ನಿರ್ವಹಿಸಲು ಇಂದಿನ ಬ್ಯಾಂಕ್ ಉದ್ಯೋಗಿಗೆ ಮಾನಸಿಕ ನೆಮ್ಮದಿಯ ಅಗತ್ಯ ಹೆಚ್ಚಾಗಿದೆ.

## ಮಾನಸಿಕ ನೆಮ್ಮದಿ

ಮಾನಸಿಕ ನೆಮ್ಮದಿ ಎಂದರೆ ಮನಸ್ಸು ಶಾಂತವಾಗಿ ಯಾವುದೇ ಉದ್ವೇಗವಿಲ್ಲದೆ, ಚಿಂತೆಯಿಲ್ಲದೆ, ದುಗುಡ-ದುಮ್ಮಾನಗಳಿಲ್ಲದೆ ಇರುವ ಸ್ಥಿತಿ. ಆದ್ದರಿಂದ ನಿರ್ವಹಿಸಬೇಕಾಗಿರುವ ಕೆಲಸವನ್ನು ತದೇಕಚಿತ್ತದಿಂದ, ದೃಷ್ಟಿ ಕೇಂದ್ರೀಕರಿಸಿ ದೃಢ ಮನಸ್ಸಿನಿಂದ ಮಾಡುವ ಸಮಯಕ್ಕೆ 'ಮಾನಸಿಕ ನೆಮ್ಮದಿಯ ಸಮಯ'ವೆನ್ನಬಹುದು.

**ನೆಮ್ಮದಿ ಇಲ್ಲದ್ದಕ್ಕೆ ಕಾರಣಗಳು**

ಇಂದಿನ ಬಹುತೇಕ ಉದ್ಯೋಗಿಗಳಲ್ಲಿ ಮಾನಸಿಕ ನೆಮ್ಮದಿ ಇರುವುದಿಲ್ಲ. ಇನ್ನು ಸ್ವಲ್ಪ ನಿಖರವಾಗಿ ಹೇಳಬೇಕೆಂದರೆ ಶೇಕಡ 80ರಷ್ಟು ಉದ್ಯೋಗಿಗಳು ಮಾನಸಿಕ ಅಶಾಂತಿಯಿಂದ, ಮಾನಸಿಕ ಒತ್ತಡದಿಂದ (ಮೆಂಟಲ್ ಟೆನ್ಶನ್) ಬಳಲುತ್ತಿದ್ದಾರೆ. ಇದಕ್ಕೆ ಕಾರಣಗಳು ಈ ಕೆಳಗಿನಂತಿವೆ:

**ಸಾಂಸಾರಿಕ ಸಮಸ್ಯೆಗಳು :** ಸಂಸಾರಿಕ ಸಮಸ್ಯೆಗಳಲ್ಲಿ ತಂದೆ ತಾಯಿಯರ ಆರೋಗ್ಯ, ಸಹೋದರರೊಂದಿಗಿನ ಜಗಳ, ಹೆಂಡತಿಯೊಡನೆ ಸಣ್ಣ ವಿರಸ, ಮಕ್ಕಳು ವಿದ್ಯಾಭ್ಯಾಸದಲ್ಲಿ ನಿರೀಕ್ಷಿತ ಪ್ರಗತಿ ತೋರದಿರುವುದು, ಹಬ್ಬ ಹರಿದಿನಗಳು, ಉಡುಗೆತೊಡಿಗೆಗಳು, ಒಡವೆ ಆಭರಣಗಳ ಸಮಸ್ಯೆ ಮುಂತಾದವು. ಈ ಸಮಸ್ಯೆಗಳಿಂದ ಮಾನಸಿಕ ನೆಮ್ಮದಿ ಇರುವುದಿಲ್ಲ.

2 **ಆರ್ಥಿಕ ಸಮಸ್ಯೆಗಳು :** ಇಂದಿನ ಮುಂದುವರಿಯುತ್ತಿರುವ ನಾಗರಿಕತೆಯಲ್ಲಿ ಅತಿ ಹೆಚ್ಚಾಗಿರುವ ನಮ್ಮ ಬೇಡಿಕೆಗಳು ಹಾಗೂ ಕೌಟುಂಬಿಕ ಬೇಡಿಕೆಗಳನ್ನು ಪೂರೈಸಲು ಹಾಗೂ ಎಲ್ಲ ಕೆಲಸಗಳಲ್ಲಿಯೂ ಅವಶ್ಯವಿರುವ ಸಂಸಾರ ಜೀವನವೆಂಬ ವಾಹನಕ್ಕೆ ಇಂಧನವಾಗಿರುವ ಈ ಹಣ ಎಷ್ಟಿದ್ದರೂ ಕಡಿಮೆ ಬೀಳುತ್ತದೆ. ಇದರಿಂದ ಕೆಲವರಿಗೆ ಆರ್ಥಿಕ ಸಮಸ್ಯೆ ಉದ್ಭವಿಸಿದರೆ ಇನ್ನು ಕೆಲವರಿಗೆ ಇದು ಉಲ್ಬಣಿಸಿ ಮಾನಸಿಕ ನೆಮ್ಮದಿಯನ್ನು ಹದಗೆಡಿಸುತ್ತದೆ.

3 **ವಾತಾವರಣ ಹಾಗೂ ಆರೋಗ್ಯ :** ಶಾಖಾ ಪ್ರದೇಶದ ವಾತಾವರಣ ಅಂದರೆ ಅತಿ ಶೀತ, ಅತಿ ಉಷ್ಣ ಅಥವಾ ಧೂಳಿನಿಂದ ಕೂಡಿರುವ ಒಣ ಪ್ರದೇಶ. ವರ್ಷದ ಹೆಚ್ಚಿನ ದಿನಗಳು ಮಳೆಯಿಂದ ಕೂಡಿರುವ ಪ್ರದೇಶಇದ್ದಾಗ ಅಲ್ಲಿಯ ಉದ್ಯೋಗಿಯ ಆರೋಗ್ಯಕ್ಕೆ ಹೊಂದಿಕೆಯಾಗದಿದ್ದಲ್ಲಿ ಅದು ಅವನನ್ನು ಅನಾರೋಗ್ಯಕ್ಕೆ ಎಡೆಮಾಡಿಕೊಟ್ಟು ಉದ್ಯೋಗಿಯ ಮಾನಸಿಕ ನೆಮ್ಮದಿ ಕೆಡಬಹುದು.

4 **ಹಿರಿಯ ಅಧಿಕಾರಿಗಳ, ನಿಯಂತ್ರಣ ಕಛೇರಿಗಳ ಆದೇಶ :** ಮೇಲಿಂದ ಮೇಲೆ ಬರುವ ಹಿರಿಯ ಅಧಿಕಾರಿಗಳ ಆದೇಶಗಳು, ತಂತಿ ಸಂದೇಶಗಳು, ದೂರವಾಣಿ ಕರೆಗಳು ತೀವ್ರವಾಗಿ ಉತ್ತರ ಅಪೇಕ್ಷಿಸುವ ನಿಯಂತ್ರಣ ಕಛೇರಿಗಳ ಒತ್ತಡ ಸಹ ಮಾನಸಿಕ ನೆಮ್ಮದಿಯನ್ನು ಕಡಿಮೆಗೊಳಿಸುತ್ತವೆ.

5 **ಬ್ಯಾಂಕು ಇರುವ ಸ್ಥಳ ಹಾಗೂ ಗ್ರಾಹಕರು :** ಬ್ಯಾಂಕು ಅತಿ ಜನನಿಬಿಡ ಪ್ರದೇಶದಲ್ಲಿ ಅತಿ ವಾಹನ ಸಂಚಾರ ಇರುವಲ್ಲಿ, ಶಬ್ದ ಮಾಲಿನ್ಯ, ವಾಯುಮಾಲಿನ್ಯ ಇರುವ ಸ್ಥಳದಲ್ಲಿ ಇದ್ದರೆ; ಇರುವ ಸಿಬ್ಬಂದಿಯ ಮಾನವ ಶಕ್ತಿ (ಮ್ಯಾನ್ ಪವರ್) ಗಿಂತಲೂ ಹೆಚ್ಚಾಗಿರುವ ಕೆಲಸ ಅಥವಾ ಕಡಿಮೆ ಸಿಬ್ಬಂದಿ ಇರುವಲ್ಲಿ ಹೆಚ್ಚಿನ ಗ್ರಾಹಕರಿದ್ದು ತೀವ್ರತರವಾಗಿ ತಮ್ಮ ಕೆಲಸಗಳನ್ನು ಪೂರೈಸಿಕೊಡಲು ಅವರು ಅಪೇಕ್ಷಿಸುವುದು, ಇದಕ್ಕಾಗಿ ನಡೆಯುವ ವಾಗ್ವಾದ, ಮನಸ್ತಾಪಗಳು ಮಾನಸಿಕ ನೆಮ್ಮದಿಯನ್ನು ಹಾಳುಗೆಡವುತ್ತವೆ.

6 **ಉದ್ಯೋಗಿ ಕೆಲಸ ಮಾಡುವ ಸ್ಥಳ :** ಉದ್ಯೋಗಿ ವರ್ಗಾವಣೆಯಲ್ಲಿ ತಾನು ಕೇಳಿದ, ನಿರೀಕ್ಷಿಸಿದ ಸ್ಥಳ ಸಿಗದಿದ್ದಾಗ, ಇಲ್ಲಿ ಅನನುಕೂಲವೇ ಜಾಸ್ತಿ ಎಂದು ಭಾವಿಸಿ ಮಾನಸಿಕ ನೆಮ್ಮದಿ ಕಳೆದುಕೊಳ್ಳಬಹುದು. ಕೆಲಸ ಮಾಡುವ ಸ್ಥಳ ಅವರ ವಾಸ್ತವ್ಯದ ಸ್ಥಳದಿಂದ ದೂರ ಇದ್ದು ಹೋಗಿ ಬಂದು ಮಾಡುತ್ತಿದ್ದರೆ ಮಾನಸಿಕ ನೆಮ್ಮದಿ ಇರುವುದಿಲ್ಲ. ಹಾಗೂ ಇನ್ನೂ ಅನೇಕ ಕಾರಣಗಳಿಂದ ಮಾನಸಿಕ ನೆಮ್ಮದಿ ಕಳೆದುಕೊಳ್ಳಬಹುದು.

**ನೆಮ್ಮದಿ ಕಳೆದುಕೊಳ್ಳುವುದರಿಂದ ನಷ್ಟಗಳು** ಬ್ಯಾಂಕ್ ಉದ್ಯೋಗಿಗಳು ಮೊದಲು ತಿಳಿಸಿದ ಕಾರಣಗಳಿಂದಾಗಲಿ ಅಥವಾ ಇತರೆ ಯಾವುದೇ ಕಾರಣಗಳಿಂದಾಗಲಿ ಮಾನಸಿಕ ನೆಮ್ಮದಿ ಕಳೆದುಕೊಂಡರೆ ಅನೇಕ ನಷ್ಟಗಳು ಆಗುತ್ತವೆ. ನಷ್ಟಗಳಲ್ಲಿ ವೈಯಕ್ತಿಕ ಹಾಗೂ ಬ್ಯಾಂಕಿನ ನಷ್ಟ ಎಂದು ವಿಭಾಗಿಸಬಹುದು :

1 **ವೈಯಕ್ತಿಕ ನಷ್ಟಗಳು :** ವೈಯಕ್ತಿಕವಾಗಿ ಮಾನಸಿಕ ನೆಮ್ಮದಿ ಕಳೆದುಕೊಳ್ಳುವುದರಿಂದ ದುಗುಡ, ದುಮ್ಮಾನಗಳು ಹೆಚ್ಚಾಗಿ ತಲೆಶೂಲೆ, ಅಶಕ್ತತೆ, ಯಾವುದೇ ಕೆಲಸದಲ್ಲಿ ನಿರಾಸಕ್ತಿ ಉಂಟಾಗುತ್ತವೆ ಮತ್ತು ದೈಹಿಕ ಬಳಲಿಕೆಯಾಗಿ ಇದು ಬಹಳ ದಿನ ಮುಂದುವರಿದಲ್ಲಿ ದೈಹಿಕ ತೊಂದರೆ ಆಗುತ್ತದೆ. ಅಂದರೆ ರಕ್ತದೊತ್ತಡ, ಹೃದಯಬೇನೆಯಂತಹ ರೋಗಗಳು ಬರಬಹುದು.

2 **ಬ್ಯಾಂಕಿನ ನಷ್ಟಗಳು :** ಬ್ಯಾಂಕಿನ ನಷ್ಟಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು :

(ಅ) ಉದ್ಯೋಗಿ ಮಾನಸಿಕ ನೆಮ್ಮದಿ ಕಳೆದುಕೊಳ್ಳುವುದರಿಂದ ಮುಖ್ಯವಾಗಿ ಉತ್ತಮ ಗ್ರಾಹಕಸೇವೆ ಸಿಗುವುದಿಲ್ಲ. ಅನೇಕ ಸಮಸ್ಯೆಗಳಿಂದ, ಅನೇಕ ಕಾರಣಗಳಿಂದ ಮಾನಸಿಕ ನೆಮ್ಮದಿ ಕಳೆದುಕೊಂಡ ನೌಕರ ಸರಿಯಾಗಿ ಗ್ರಾಹಕ ಸೇವೆ ಕೊಡುವುದಿಲ್ಲ. ಬ್ಯಾಂಕಿನೊಂದಿಗೆ ವ್ಯವಹಾರಕ್ಕಾಗಿ ಬರುವ ಗ್ರಾಹಕರು, ಸಿಡಿಮಿಡಿಗೊಳ್ಳುವ ಸಿಬ್ಬಂದಿ ಸೇವೆಯಿಂದ ತೃಪ್ತರಾಗುವುದಿಲ್ಲ. ಇದು ವಾಗ್ವಾದಕ್ಕೆ ಎಡೆಮಾಡಿಕೊಡಬಹುದು. ಇಂತಹ ಗ್ರಾಹಕಸೇವೆಯಿಂದ ಗ್ರಾಹಕ ವಿಮುಖನಾಗಿ ಬ್ಯಾಂಕಿನೊಂದಿಗೆ ತನ್ನ ವ್ಯವಹಾರವನ್ನೇ ನಿಲ್ಲಿಸಬಹುದು. ಇದರಿಂದ ಬ್ಯಾಂಕು ಒಟ್ಟಾರೆ ವ್ಯವಹಾರ ಕಡಿಮೆಮಾಡಿಕೊಂಡು ನಷ್ಟಕ್ಕೊಳಗಾಗಬಹುದು.

(ಬ) ನಿಗದಿತ ಸಮಯದಲ್ಲಿ ಮನೆವಾರ್ತೆ (ಹೌಸ್ ಕಿಪಿಂಗ್) ಮುಗಿಯುವುದಿಲ್ಲ.

(ಕ) ಠೇವಣಿ ಹಾಗೂ ಸಾಲದ ಖಾತೆಗಳ ತಾಳೆ ಮಾಡುವ ಕೆಲಸ (ಬ್ಯಾಲೆನ್ಸಿಂಗ್) ತೀವ್ರ ಮುಗಿಯುವುದಿಲ್ಲ.

(ಡ) ಮಾನಸಿಕ ಅಶಾಂತಿಯಿಂದ ಕೌಂಟರಿನಲ್ಲಿ ಹಣದ ವ್ಯತ್ಯಾಸ ಕಂಡುಬರುತ್ತದೆ.

(ಇ) ಮೇಲಧಿಕಾರಿಗಳಿಗೆ ಮತ್ತು ನಿಯಂತ್ರಣ ಕಛೇರಿಗಳಿಗೆ ಕಾಲಕಾಲಕ್ಕೆ ಪರತವಮಾಹಿತಿ (ಸ್ಟೇಟ್‌ಮೆಂಟ್ಸ್ ಮತ್ತು ರಿಟರ್ನ್ಸ್) ತಲುಪುವುದಿಲ್ಲ.

(ಉ) ಬ್ಯಾಂಕಿನ ಇತರೆ ಎಲ್ಲಾ ಕೆಲಸಗಳಲ್ಲಿ ತಡವಾಗುವಿಕೆ ಮತ್ತು ತಪ್ಪಾಗುವಿಕೆ ಪ್ರಾರಂಭವಾಗುತ್ತದೆ.

ಮಾನಸಿಕ ನೆಮ್ಮದಿಯಿಂದಿರಲು ಏನು ಮಾಡಬೇಕು ? ಬ್ಯಾಂಕ್ ಉದ್ಯೋಗಿ ಮಾನಸಿಕ ನೆಮ್ಮದಿ ಕಳೆದುಕೊಳ್ಳಲು ಇರುವ ಸಮಸ್ಯೆಗಳನ್ನು ಈ ರೀತಿಯಾಗಿ ಬಗೆಹರಿಸಿಕೊಳ್ಳಬಹುದು :

1 **ಸಾಂಸಾರಿಕ ಸಮಸ್ಯೆಗಳು :** ಬ್ಯಾಂಕ್ ಉದ್ಯೋಗಿಗಳು ಸಾಂಸಾರಿಕ ಸಮಸ್ಯೆಗಳನ್ನು ತಮ್ಮ ಕುಟುಂಬದಲ್ಲಿ ಆಂತರಿಕ ಹೊಂದಾಣಿಕೆ ಮಾಡಿಕೊಂಡು ಬಗೆಹರಿಸಿಕೊಳ್ಳಬೇಕು. ಹೆಚ್ಚಿನ ಸಾಂಸಾರಿಕ ಸಮಸ್ಯೆಗಳು ಆರ್ಥಿಕ ಮೂಲವಾಗಿರುವುದರಿಂದ, ಆರ್ಥಿಕ ಸಮಸ್ಯೆ ಬಗೆಹರಿಸಿಕೊಂಡು ಹಾಗೂ ಬ್ಯಾಂಕಿನ ಕೆಲಸದ ಸಮಯದಲ್ಲಿ ಸಾಂಸಾರಿಕ ಸಮಸ್ಯೆಗಳಿದ್ದರೂ ಬದಿಗಿಟ್ಟು ಶಾಂತ ಚಿತ್ತದಿಂದ ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದು.

2 **ಆರ್ಥಿಕ ಸಮಸ್ಯೆಗಳು :** ಇಂದು ಹೆಚ್ಚಿನ ಜನರು ತಮ್ಮ ಆದಾಯಕ್ಕಿಂತ ಹೆಚ್ಚಿನ ಖರ್ಚು ವೆಚ್ಚಗಳನ್ನು ರೂಪಿಸಿಕೊಂಡಿರುತ್ತಾರೆ. ದೊಡ್ಡ ದೊಡ್ಡ ಯೋಜನೆಗಳನ್ನು, ಆಸೆ ಆಕಾಂಕ್ಷೆಗಳನ್ನು ಹೊಂದಿರುತ್ತಾರೆ. ಇದರಿಂದ ಆರ್ಥಿಕ ಅಸಮತೋಲವಾಗಿ, ಆರ್ಥಿಕ ಸಮಸ್ಯೆಗಳು ಉದ್ಭವಿಸುತ್ತವೆ. ಈ ಸಮಸ್ಯೆಯನ್ನು ನಿವಾರಿಸಲು ತಮಗೆ ಬರುವ ಆದಾಯದಲ್ಲೆ ಖರ್ಚುಗಳನ್ನು ನಿಭಾಯಿಸಬೇಕು. ಇದರಿಂದ ಮಾನಸಿಕ ನೆಮ್ಮದಿ ಪಡೆಯಲು ಸಾಧ್ಯ.

3 **ವಾತಾವರಣ ಹಾಗೂ ಅನಾರೋಗ್ಯ :** ಶಾಖಾ ಪ್ರದೇಶದ ವಾತಾವರಣ ತಮ್ಮ ದೇಹಕ್ಕೆ ಅನುಕೂಲಕರವಾಗಿರದಿದ್ದಲ್ಲಿ, ಅಲ್ಲಿನ ವಾತಾವರಣಕ್ಕೆ ಹೊಂದುವಂತೆ ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಂಡು, ಅಲ್ಲಿಯ ಹವಾಗುಣಕ್ಕನುಗುಣವಾಗಿ ಆಹಾರ ಸೇವನೆ ಉಡುಪು ಇತರೆ ವ್ಯವಸ್ಥಿತ ಜೀವನ ನಡೆಸಿದಲ್ಲಿ ಈ ಸಮಸ್ಯೆ ಬಗೆಹರಿಯುತ್ತದೆ.

4 **ಹಿರಿಯ ಅಧಿಕಾರಿಗಳ, ನಿಯಂತ್ರಣ ಕಛೇರಿಗಳ ಆದೇಶಗಳು :** ಮೇಲಿಂದಮೇಲೆ ಬರುವ ಹಿರಿಯ ಅಧಿಕಾರಿಗಳ ಆದೇಶಗಳು ಮತ್ತು ನಿಯಂತ್ರಣ ಕಛೇರಿಗಳ ಆದೇಶಗಳು ಬಂದು ಅವುಗಳಿಗೆ ತೀವ್ರ ರೀತಿಯಲ್ಲಿ ಉತ್ತರ ನಿರೀಕ್ಷಿಸುವುದರಿಂದ ಇತರೆ ಕೆಲಸಗಳನ್ನು ಬದಿಗಿಟ್ಟು ಆ ಕೆಲಸಕ್ಕೆ ಹೆಚ್ಚಿನ ಆದ್ಯತೆ ಕೊಟ್ಟು ಹೆಚ್ಚಿನ ಸಿಬ್ಬಂದಿ ಆ ಕೆಲಸ ನಿರ್ವಹಿಸಿದಲ್ಲಿ ಈ ಸಮಸ್ಯೆ ಬಗೆಹರಿಸಬಹುದು.

5 **ಬ್ಯಾಂಕು ಇರುವ ಸ್ಥಳ ಹಾಗೂ ಗ್ರಾಹಕರು :** ಬ್ಯಾಂಕಿನ ಶಾಖೆಗಳು ಯಾವಾಗಲೂ ಅತಿ ಜನನಿಬಿಡ ರಸ್ತೆ, ಶಬ್ದ ಮಾಲಿನ್ಯ, ವಾಯುಮಾಲಿನ್ಯ ಇರುವಂತಹಸ್ಥಳದಲ್ಲಿ ಇರಬಾರದು. ಆದ್ದರಿಂದ ಈ ವಿಷಯದಲ್ಲಿ ಬ್ಯಾಂಕ್ ಕಟ್ಟಡ ಎಲ್ಲಿರಬೇಕೆಂದು ನಿರ್ಧರಿಸುವುದು ಅತಿ ಅವಶ್ಯ. ಶಾಖೆಯಲ್ಲಿ ಹೆಚ್ಚಿನ ವ್ಯವಹಾರವಿದ್ದು ಗ್ರಾಹಕರು ಹೆಚ್ಚಾಗಿ, ಕಡಿಮೆ ಸಿಬ್ಬಂದಿ ಇದ್ದು ಕೆಲಸದೊತ್ತಡದಿಂದ ಮಾನಸಿಕ ನೆಮ್ಮದಿ ಕೆಡಿಸುತ್ತಿದ್ದಲ್ಲಿ , ಅಲ್ಲಿ ನಿಯಂತ್ರಣ ಕಛೇರಿಯವರು ವ್ಯವಹಾರವನ್ನು ನೋಡಿ ಹೆಚ್ಚಿನ ಸಿಬ್ಬಂದಿ ಒದಗಿಸುವುದರ ಮೂಲಕ ಈ ಸಮಸ್ಯೆ ಬಗೆಹರಿಸಬಹುದು.

6 **ಉದ್ಯೋಗಿ ಕೆಲಸ ಮಾಡುವ ಸ್ಥಳ :** ಉದ್ಯೋಗಿ ತನ್ನ ವರ್ಗಾವಣೆಯಾದಾಗ ತಾನು ಬೇಡಿದ, ನಿರೀಕ್ಷಿಸಿದ ಸ್ಥಳ ಸಿಗದಿದ್ದಲ್ಲಿ, ಅಲ್ಲಿ ಅನನುಕೂಲವೇ ಜಾಸ್ತಿ ಎಂದು ಭಾವಿಸದೆ ಅಲ್ಲಿಯ ಸ್ಥಿತಿಗೆ ಹೊಂದಿಕೊಳ್ಳಬೇಕು. ಕೆಲಸ ಮಾಡುವ ಸ್ಥಳದಲ್ಲೆ ವಾಸ್ತವ್ಯ ಮಾಡುವುದರಿಂದ ಹೋಗಿ-ಬಂದು ಮಾಡುವಾಗಿನ (ಸಮಯಕ್ಕೆ ಸರಿಯಾಗಿ ಸಂಚಾರಕ್ಕೆ ಅನುಕೂಲವಿರದಿದ್ದಲ್ಲಿ) ಮಾನಸಿಕ ಒತ್ತಡ ಇರುವುದಿಲ್ಲ. ಈ ವಿಷಯದಲ್ಲಿ ನಿಯಂತ್ರಣ ಕಛೇರಿಯವರು, ಆಡಳಿತ ಮಂಡಳಿಯವರು ಕೂಡ ಹೆಚ್ಚಾಗಿ ಉದ್ಯೋಗಿ ಬೇಡುವ ಸ್ಥಳದಲ್ಲಿ ವರ್ಗ ಮಾಡಿದರೆ ಆ ಉದ್ಯೋಗಿಯು ಉಲ್ಲಸಿತನಾಗಿ ಹೆಚ್ಚಿನ ಮುತುವರ್ಜಿ ವಹಿಸಿ ಕೆಲಸ ಮಾಡುತ್ತ ಉತ್ತಮ ಗ್ರಾಹಕ ಸೇವೆ ಕೊಡುತ್ತಾನೆ. ಇದರಿಂದ ಮಾನಸಿಕ ನೆಮ್ಮದಿಯಿಂದಿರಲು ಸಾಧ್ಯ.

ಒಟ್ಟಾರೆ ಕ್ಲಿಷ್ಟಕರ ಸಮಯದಲ್ಲಿ ಉತ್ತಮ ಗುಣಮಟ್ಟದೊಂದಿಗೆ ತೀವ್ರತರ ರೀತಿಯಲ್ಲಿ ಕೆಲಸ ನಿರ್ವಹಿಸಲು ಕಂಪ್ಯೂಟರ್‌ಗಳನ್ನು ಸ್ಥಾಪಿಸಲಾಗಿದೆ. ತೀವ್ರ ಲೆಕ್ಕಾಚಾರಕ್ಕೆ ಗಣಕಗಳನ್ನು ಪೂರೈಸಲಾಗಿದೆ. ಇತರೆ ಆಧುನಿಕ ಸಾಧನಗಳ ಲಾಭವನ್ನೂ ಪಡೆಯಬೇಕು.

## ಉಪಸಂಹಾರ

ಬ್ಯಾಂಕ್ ಉದ್ಯೋಗಿ ಯಾವುದೇ ಕಾರಣದಿಂದ ಮಾನಸಿಕ ನೆಮ್ಮದಿ ಕಳೆದುಕೊಂಡರೂ, ಬ್ಯಾಂಕಿನ ಕೆಲಸಗಳು ಮಂದಗತಿಯಲ್ಲಿ ಸಾಗಿ, ಒಟ್ಟಾರೆ ಬ್ಯಾಂಕಿನ ಪ್ರಗತಿಯಲ್ಲಿ ಕುಂಠಿತವಾಗುತ್ತದೆ. ಆದ್ದರಿಂದ ಎಷ್ಟೇ ಸಮಸ್ಯೆಗಳನ್ನು ಹೊಂದಿದ್ದರೂ ಕೆಲಸದ ವೇಳೆಯಲ್ಲಿ ಅವುಗಳನ್ನು ಬದಿಗಿಟ್ಟು ನಿರ್ಮಲ ಮನಸ್ಸಿನಿಂದ ಕೆಲಸ ನಿರ್ವಹಿಸಿದಾಗ ಮಾತ್ರ, ಬ್ಯಾಂಕುಗಳು ಇನ್ನೂ ಉತ್ತಮ ಗ್ರಾಹಕ ಸೇವೆ ಕೊಟ್ಟು ಹೆಚ್ಚಿನ ಪ್ರಗತಿ ಹೊಂದಲು ಸಾಧ್ಯ. ಈ ರೀತಿಯಾಗಿ ಬ್ಯಾಂಕ್ ಉದ್ಯೋಗದಲ್ಲಿ ಮಾನಸಿಕ ನೆಮ್ಮದಿಯೂ ಮಹತ್ತರ ಪಾತ್ರ ವಹಿಸುತ್ತದೆ. ●

# ಸಹಕಾರಿ ಕ್ಷೇತ್ರದಲ್ಲಿ ಪತ್ತು ಯೋಜನೆಯ ಸಮಸ್ಯೆಗಳು

ಡಾ. ಎಂ. ಆರ್. ಸೂಲ್ಲಾಪುರ್

ಕೃಷಿಪ್ರಧಾನವಾದ ಭಾರತದಲ್ಲಿ ವ್ಯವಸಾಯಕ್ಕೆ ಅಗತ್ಯವಾದ ಪತ್ತಿನ ಸಮರ್ಪಕ ವಿತರಣೆಯ ವ್ಯವಸ್ಥೆಯೊಂದು ರೂಪಿತವಾಗಬೇಕಾಗಿದೆ. ಈಗಿನ ಪತ್ತು ವ್ಯವಸ್ಥೆ ಅನೇಕ ದೋಷಗಳಿಂದ ಕೂಡಿದ್ದು, ನಿರಂತರ ಪರೀಕ್ಷಣೆಯ ಆಧಾರದ ಮೇಲೆ ರಚಿತವಾಗಿರದ ಈ ವ್ಯವಸ್ಥೆ ತನ್ನ ಉದ್ದೇಶದ ಪೂರೈಕೆಯಲ್ಲಿ ವಿಫಲವಾಗಿದೆ.

ಭಾರತ ಕೃಷಿಪ್ರಧಾನ ಅರ್ಥವ್ಯವಸ್ಥೆಯಾಗಿದ್ದು, ದೇಶದ ಶೇಕಡ ಎಂಬತ್ತರಷ್ಟು ಜನತೆಗೆ ಜೀವನೋಪಾಯವನ್ನೂ, ರಾಷ್ಟ್ರೀಯ ವರಮಾನದಲ್ಲಿ ಪ್ರತಿಶತ ಐವತ್ತರಷ್ಟು ಕಾಣಿಕೆಯನ್ನೂ ಕೃಷಿರಂಗ ಸಲ್ಲಿಸುತ್ತದೆ. ಯಾವುದೇ ಉತ್ಪಾದನ ಚಟುವಟಿಕೆಗೆ ಆವಶ್ಯಕವಾಗಿರುವಂತೆ, ಕೃಷಿಯಲ್ಲೂ ಅದರ ಅನೇಕಪ್ರಕ್ರಿಯೆಗಳಲ್ಲಿ "ಹಣಕಾಸು" ಮಹತ್ವದ ಪಾತ್ರ ವಹಿಸುತ್ತದೆ. ಭಾರತೀಯ ಕೃಷಿಕರ ಸೀಮಿತ ಹಣಕಾಸಿನ ಸ್ವಸಾಮರ್ಥ್ಯ ಒಂದೆಡೆ, ಆಧುನಿಕ ತಂತ್ರಜ್ಞಾನದ ಅಳವಡಿಕೆಯಿಂದ ಕೃಷಿಗೆ ವಿನಿಯೋಗಿಸಬೇಕಾಗಿ ಬಂದ ಹೆಚ್ಚಿನ ಹಣಕಾಸಿನ ಆವಶ್ಯಕತೆ ಇನ್ನೊಂದೆಡೆ ಉದ್ಭವಿಸಿರುವುದರಿಂದ, ಕೃಷಿಗೆ ಬೇಕಿರುವ ಹಣಕಾಸಿನ ಪೂರೈಕೆಗೆ ಬಾಹ್ಯ ಮೂಲಗಳ ಅವಶ್ಯಕತೆ ಉಂಟಾಗಿದೆ. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ಕೃಷಿ ಪತ್ತು ವ್ಯವಸ್ಥೆ ರೂಪುಗೊಂಡಿದೆ.

## ಬಹುಸಾಂಸ್ಥಿಕ ಪತ್ತು ವ್ಯವಸ್ಥೆ

ಹಿಂದಿನ ಕಾಲದಿಂದಲೂ ಭಾರತದಲ್ಲಿ ಅಸಾಂಸ್ಥಿಕ ವಲಯದ (ನಾನ್-ಇನ್‌ಸ್ಟಿಟ್ಯೂಷನಲ್ ಸೆಕ್ಟರ್) ಲೇವಾದೇವಿದಾರರು, ಜಮೀನ್ದಾರರು, ವ್ಯಾಪಾರಿಗಳು ಕೃಷಿ ಪತ್ತು ಪೂರೈಕೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತ ಬಂದಿರುವರು. ಆದರೆ ಇದೊಂದು ಕೃಷಿ ಅಭಿವೃದ್ಧಿಗೆ ಮತ್ತು ಕೃಷಿಕರ ಹಿತಾಸಕ್ತಿಗಳಿಗೆ ಪೂರಕವಲ್ಲದ ವ್ಯವಸ್ಥೆಯಾದ್ದರಿಂದ, ಶೋಷಣಾರಹಿತವಾದ ಮತ್ತು ಅಭಿವೃದ್ಧಿ ಪೂರಕವಾದ ಸಾಂಸ್ಥಿಕ ಕೃಷಿ ಪತ್ತು ವ್ಯವಸ್ಥೆಯನ್ನು ರೂಪಿಸುವ ಅನಿವಾರ್ಯತೆ ಈ ಶತಮಾನದ ಆರಂಭದಲ್ಲಿಯೇ ಉದ್ಭವಿಸಿತ್ತು. 1904ರಲ್ಲಿ ಭಾರತೀಯ ಸಹಕಾರಿ ಸಂಘಗಳ ಕಾನೂನನ್ನು ಜಾರಿಯಲ್ಲಿ ತರುವುದರ ಮೂಲಕ ಸಹಕಾರಿ ಕೃಷಿ ಪತ್ತು ವ್ಯವಸ್ಥೆಯನ್ನು ಅನುಷ್ಠಾನಕ್ಕೆ ತರಲಾಯಿತು. ಇದು ಭಾರತದಲ್ಲಿ ಪ್ರಥಮ ಸಾಂಸ್ಥಿಕ ವಲಯದ ಕೃಷಿ ಪತ್ತು ವ್ಯವಸ್ಥೆಯೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಸಹಕಾರಿ ಕೃಷಿ ಪತ್ತು ವ್ಯವಸ್ಥೆ ಗ್ರಾಮೀಣ ವಲಯದಲ್ಲಿ ಪ್ರಾಥಮಿಕ ಸಹಕಾರಿ ಕೃಷಿ ಸಂಘ (ಬ್ಯಾಂಕ್)ಗಳು, ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಮತ್ತು ರಾಜ್ಯಮಟ್ಟದಲ್ಲಿ ಅಪೆಕ್ಸ್ ಬ್ಯಾಂಕುಗಳು ಎಂಬ ಮೂರು ಸ್ತರಗಳನ್ನೊಳಗೊಂಡ ಪತ್ತು ವ್ಯವಸ್ಥೆಯಾಗಿದೆ.

ಸಾಂಸ್ಥಿಕ ಕೃಷಿ ಪತ್ತು ವ್ಯವಸ್ಥೆಗೆ 1969ರಲ್ಲಿ ವಾಣಿಜ್ಯ ಬ್ಯಾಂಕುಗಳು ಮತ್ತು 1975ರಲ್ಲಿ ಗ್ರಾಮೀಣ ಬ್ಯಾಂಕುಗಳು ಸೇರ್ಪಡೆಯಾಗಿರುವುದರಿಂದ, ಇಂದು ಭಾರತದಲ್ಲಿ ಬಹುಸಾಂಸ್ಥಿಕ ಕೃಷಿ ಪತ್ತು ವ್ಯವಸ್ಥೆಯನ್ನು ಕಾಣಬಹುದಾಗಿದೆ.

## ಸಹಕಾರಿ ಪತ್ತಿನ ಶ್ರೇಷ್ಠತೆ

ಕೃಷಿ ಪತ್ತು ವ್ಯವಸ್ಥೆಯಲ್ಲಿ ಸಹಕಾರಿ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಏಕಕಾಲದಲ್ಲಿ ಕಾರ್ಯಪ್ರವೃತ್ತರಾಗಿದ್ದರೂ, ಸಹಕಾರಿ ಬ್ಯಾಂಕುಗಳು ಸರ್ವಶ್ರೇಷ್ಠವಾಗಿದೆ. ಸ್ಥಳೀಯ ಕೃಷಿಕರಿಂದಲೇ ಸಂಘಟಿಸಲ್ಪಟ್ಟ ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯನ್ನು ಮೈಗೂಡಿಸಿಕೊಂಡ, 'ತಾನು ಎಲ್ಲರಿಗೆ, ಎಲ್ಲರೂ ತನಗಾಗಿ' ಎಂಬ ಉದಾತ್ತತೆಯ ಚೌಕಟ್ಟಿನಲ್ಲಿ ರೂಪುಗೊಂಡ ಸಹಕಾರಿ ಬ್ಯಾಂಕುಗಳು ಸಮರ್ಪಕ, ಕಡಿಮೆ ಬಡ್ಡಿದರದ, ಉತ್ಪಾದನ ಪೂರಕವಾದ, ಕೃಷಿಕರಿಗೆ ಸ್ವೀಕಾರಾರ್ಹವಾದ ಪತ್ತು ವ್ಯವಸ್ಥೆಯನ್ನು ರೂಪಿಸಿಕೊಂಡಿವೆ. ಆದ್ದರಿಂದಲೇ ಅವು ಹಣಕಾಸಿನ ಅತ್ಯಂತ ಸುಸ್ಥಿತಿ ಮತ್ತು ಉನ್ನತ ಕಾರ್ಯಕ್ಷಮತೆಯನ್ನು ಹೊಂದಿರುವ ವಾಣಿಜ್ಯ ಬ್ಯಾಂಕುಗಳ ಮಧ್ಯೆಯೂ ತಮ್ಮ ಔಚಿತ್ಯವನ್ನು ಇಂದಿಗೂ ಉಳಿಸಿಕೊಂಡು ಬಂದಿವೆ. ಬಹುಸಾಂಸ್ಥಿಕ ಪತ್ತು ವಲಯದಲ್ಲಿ ಸಹಕಾರಿ ಪತ್ತಿನ ಪ್ರಮಾಣವನ್ನು ಗಮನಿಸು

ವುದರಿಂದ ಈ ಅಂಶ ಮನವರಿಕೆಯಾಗುತ್ತದೆ. ಅದನ್ನು ಈ ಮುಂದಿನ "ಕೃಷಿ ಪತ್ತಿನ ಹರಿವು" ಪಟ್ಟಿಯಲ್ಲಿ ಕೊಡಲಾಗಿದೆ.

**ಸಾಂಸ್ಥಿಕ ಕೃಷಿ ಪತ್ತಿನ ಹರಿವು**

(ರೂಪಾಯಿ ಕೋಟಿಗಳಲ್ಲಿ)

| ವರ್ಷ | ಸಹಕಾರಿ ಬ್ಯಾಂಕುಗಳು | ವಾಣಿಜ್ಯ ಮತ್ತು ಗ್ರಾಮೀಣ ಬ್ಯಾಂಕುಗಳು | ಒಟ್ಟು |
|---|---|---|---|
| 1985–86 | 3.874 | 3,131 | 7,005 |
| 1987–88 | 5.246 | 4,009 | 9,255 |
| 1989–90 | 5,256 | 4,930 | 10,186 |
| 1992–93 | 6,295 | 6,705 | 13,000 |
| 1993–94 | 8,500 | 6,600 | 15,100 |

ತಮ್ಮ ಮುಂಗಡಪತ್ರದಲ್ಲಿ ವಿತ್ತ ಸಚಿವ ಡಾ. ಮನಮೋಹನ ಸಿಂಗರು "ಸಹಕಾರಿ ಪತ್ತು ವ್ಯವಸ್ಥೆಯು, ಭಾರತದ ಕೃಷಿ ಅಭಿವೃದ್ಧಿಗೆ ತನ್ನ ಪತ್ತಿನ ಆಸರೆಯನ್ನು ಒದಗಿಸುವುದರ ಮೂಲಕ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತಿದೆ" ಎಂದು ಹೇಳಿರುವುದು ತುಂಬಾ ಔಚಿತ್ಯಪೂರ್ಣವಾಗಿದೆ.

ಸಂಖ್ಯಾತ್ಮಕವಾಗಿ ಸಹಕಾರಿ ಪತ್ತಿನ ಗಾತ್ರ ಹಿರಿಮೆಯನ್ನು ಹೊಂದಿದ್ದರೂ, ಇದೊಂದು ಯೋಗ್ಯಪ್ರಮಾಣದ, ಆವಶ್ಯಕತೆಗೆ ಪೂರಕವಾದ ಪತ್ತಿನ ಪ್ರಮಾಣವೇ ಎಂಬುದರ ಪರಾಮರ್ಶೆ ಈಗ ಆಗಬೇಕಾಗಿದೆ.

## ಯೋಗ್ಯ ಪ್ರಮಾಣದ ಪತ್ತು

ಅತ್ಯಂತ ಕೆಳಸ್ತರದಲ್ಲಿರುವ,ಕೃಷಿಕರ ಸಂಘಟನೆಯಾದ ಪ್ರಾಥಮಿಕ ಸಹಕಾರಿ ಬ್ಯಾಂಕುಗಳ ಕೃಷಿ ಪತ್ತಿನ ಪ್ರಮಾಣವನ್ನು ನಿರ್ಧರಿಸುವುದೇ ಸಹಕಾರಿ ಕೃಷಿ ಪತ್ತು ಪ್ರಮಾಣ ಯೋಜನೆಯ ಬುನಾದಿಯಾಗಿದೆ. ಈ ಕಾರ್ಯವನ್ನು ಪ್ರಾಥಮಿಕ ಸಹಕಾರಿ ಬ್ಯಾಂಕುಗಳ ಒಕ್ಕೂಟವಾದ ಜಿಲ್ಲಾ ಸಹಕಾರಿ ಬ್ಯಾಂಕು ನಿರ್ವಹಿಸುತ್ತಿದ್ದು, ರಾಜ್ಯ ಅಪೆಕ್ಸ್ ಬ್ಯಾಂಕ್ ಈ ಸಹಕಾರಿ ಕೃಷಿ ಪತ್ತಿನ ಹರಿವಿಗೆ ಸಹಾಯಹಸ್ತ ಒದಗಿಸುತ್ತದೆ.

ಸಹಕಾರಿ ಕೃಷಿ ಪತ್ತಿನ ಪ್ರಮಾಣ ಕೃಷಿಕರ ಉತ್ಪಾದನೆಯ ಆವಶ್ಯಕತೆಗಳಿಗೆ ಪೂರಕವಾಗಬೇಕೆಂದು ಅಪೇಕ್ಷಿಸಲಾಗಿದೆ. ತಜ್ಞರ ಸಮಿತಿಯಿಂದ ಬೆಳೆವಾರು ನಿಗದಿಯಾದ ಪತ್ತಿನ ದರಗಳನ್ನು (ಸ್ಕೇಲ್ ಆಫ್ ಕ್ರೆಡಿಟ್) ಪ್ರತಿ ಕೃಷಿಕನೂ ಹೊಂದಿರುವ ಎಕರೆವಾರು ಜಮೀನಿನೊಂದಿಗೆ ಗುಣಿಸಿ, ಸದರಿ ಕೃಷಿಕನಿಗೆ ಕೊಡಬಹುದಾದ ಪತ್ತಿನ ಪ್ರಮಾಣವನ್ನು ನಿರ್ಧರಿಸಲಾಗುತ್ತದೆ. ಹೀಗೆ ಪತ್ತಿನ ದರಗಳು ಪತ್ತಿನ ಪ್ರಮಾಣದ ಅಳತೆಗೋಲು ಆಗಿರುತ್ತದೆ.

ಕೃಷಿಕರಿಗೆ ಕೊಡಮಾಡಿದ ಪತ್ತಿನ ಪ್ರಮಾಣದ ಸಾಫಲ್ಯ, ಅದು ಎಷ್ಟರಮಟ್ಟಿಗೆ ಕೃಷಿ ಉತ್ಪಾದನೆಯಲ್ಲಿ ಫಲಪ್ರದಾಯಕವಾಗಿ ವಿನಿಯೋಗವಾಗಿ, ತನ್ಮೂಲಕ ಸಂಪನ್ಮೂಲಗಳನ್ನು ಸೃಷ್ಟಿಸಿ, ಪತ್ತು ಹಣವನ್ನು ಮರುಸಂದಾಯ ಮಾಡಬಹುದಾಗಿದೆ ಎಂಬುದನ್ನು ಅವಲಂಬಿಸಿದೆ. ಇದು ಸಾಧ್ಯವಾಗಬೇಕಾದರೆ ಪತ್ತು ಪ್ರಮಾಣ ಕೃಷಿಕರ ಅಗತ್ಯಗಳಿಗೆ ಪೂರಕವಾಗಿರಬೇಕು. ಈ ವಸ್ತುನಿಷ್ಠ ಪತ್ತು ಪ್ರಮಾಣವೇ "ಯೋಗ್ಯ ಪ್ರಮಾಣದ ಪತ್ತು" ಎನಿಸಿಕೊಳ್ಳುತ್ತದೆ.

ಯೋಗ್ಯ ಪ್ರಮಾಣದ ಪತ್ತನ್ನು ನಿರ್ಧರಿಸಬೇಕಾದರೆ, ಕೃಷಿಕರು ಮತ್ತು ಅವರ ಪ್ರಾಥಮಿಕ ಸಹಕಾರಿ ಬ್ಯಾಂಕುಗಳೊಂದಿಗೆ ಉನ್ನತ ಸಂಸ್ಥೆಗಳು ಅವರ ಉತ್ಪಾದನೆಯ ಆವಶ್ಯಕತೆಗಳ ಕುರಿತು ಚರ್ಚೆ ನಡೆಸಬೇಕು. ಇದೊಂದು ಸಹಭಾಗಿತ್ವ ಪತ್ತು ಯೋಜನೆ ಪರಿಕ್ರಮ (ಪಾರ್ಟಿಸಿಪೇಟಿವ್ ಕ್ರೆಡಿಟ್ ಪ್ಲಾನಿಂಗ್ ಪ್ರೋಸೆಸ್) ಆಗಬೇಕು. ಎರಡನೆಯದಾಗಿ, ಪತ್ತಿನ ದರಗಳು ಏರುತ್ತಿರುವ ಬೆಲೆಗಳೊಂದಿಗೆ ಪರಿಷ್ಕರಿಸಲ್ಪಡುತ್ತಿರಬೇಕು. ಇದು ಪತ್ತಿನ ದರಗಳ ಚಲನಶೀಲತೆಯಾಗಿದೆ. ಪತ್ತು ಪ್ರಮಾಣ ನಿರ್ಧಾರದ ಈ ಎರಡು ಮೂಲಭೂತ ಅಂಶಗಳು ವಾಸ್ತವಿಕವಾಗಿ ಎಷ್ಟರಮಟ್ಟಿಗೆ ಕಾರ್ಯರೂಪದಲ್ಲಿವೆ ಎಂಬುದು ಗಮನ ಸೆಳೆಯುವ ವಿಷಯವಾಗಿದೆ.

## ಸಹಭಾಗಿತ್ವ ಪತ್ತು ಯೋಜನೆ

ಸರ್ಕಾರ, ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು ಮತ್ತು ಇತರ ಸಾಂಸ್ಥಿಕ ಪ್ರತಿನಿಧಿಗಳನ್ನೊಳಗೊಂಡ ಜಿಲ್ಲಾ ಮಟ್ಟದ ತಜ್ಞರ ಸಮಿತಿಯು (ಟೆಕ್ನಿಕಲ್ ಗ್ರೂಪ್), ಆಯಾ ಜಿಲ್ಲೆಗೆ ಅನ್ವಯಿಸುವಂತೆ ಕೃಷಿ ಪತ್ತು ದರಗಳನ್ನು ರೂಪಿಸುವ ಕಾರ್ಯವನ್ನು ನಿರ್ವಹಿಸುತ್ತದೆ. ಪತ್ತಿನ ದರಗಳು ವಸ್ತುನಿಷ್ಠನ್ನವಾಗಿರುವಂತೆ ಮಾಡಲು ಈ ಸಮಿತಿಗಳಲ್ಲಿ ಕೃಷಿಕರನ್ನು ಸೇರಿಸಿಕೊಳ್ಳುವ ಅವಕಾಶವನ್ನು ರಿಸರ್ವ್ ಬ್ಯಾಂಕ್ ಮಾಡಿಕೊಟ್ಟಿದೆ.

ಆದರೆ ವಾಸ್ತವಿಕವಾಗಿ ಅನೇಕ ತಜ್ಞರ ಸಮಿತಿಗಳಲ್ಲಿ ಸುಮಾರು ಎಪ್ಪತ್ತು ಪ್ರತಿಶತ ಸರ್ಕಾರ ಮತ್ತು ವಾಣಿಜ್ಯ ಬ್ಯಾಂಕುಗಳು, ಎಪ್ಪತ್ತು ಪ್ರತಿಶತ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳಂಥ ಸಹಕಾರಿ ಬ್ಯಾಂಕುಗಳು ಮತ್ತು ಉಳಿದ ಹತ್ತು ಪ್ರತಿಶತ ಇತರ ಸಾಂಸ್ಥಿಕ ಪ್ರತಿನಿಧಿಗಳ ಪ್ರಾತಿನಿಧಿತ್ವವನ್ನು ಕಾಣುತ್ತೇವೆ. ಕೇವಲ ಪ್ರತಿಶತ ಇಪ್ಪತ್ತರಷ್ಟು ಪ್ರಾತಿನಿಧ್ಯದೊಂದಿಗೆ ತೃಪ್ತಿಹೊಂದಿರುವ ಸಹಕಾರಿ ಪತ್ತು ವ್ಯವಸ್ಥೆ ತಜ್ಞರ ಸಮಿತಿಯಲ್ಲಿ ಸೀಮಾಂತಗೊಳಿಸಲ್ಪಟ್ಟಿದೆ. ಎಲ್ಲಕ್ಕಿಂತ ಮಿಗಿಲಾಗಿ ಸಹಕಾರಿ ಪತ್ತಿನ ಆಧಾರಸ್ತರವಾದ ಪ್ರಾಥಮಿಕ ಸಹಕಾರಿ ಬ್ಯಾಂಕುಗಳಾಗಲಿ ಕೃಷಿಕರಾಗಲಿ ತಜ್ಞರ ಸಮಿತಿಯಲ್ಲಿ ಪ್ರಾತಿನಿಧ್ಯವನ್ನು ಪಡೆಯದೆ ಇರುವುದು, ಪತ್ತು ದರ ಮತ್ತು ಪ್ರಮಾಣದ ಸೂಕ್ತತೆಯ ಬಗ್ಗೆ ಶಂಕೆ ತಾರದಿರದು. ಇವು

ಕೃಷಿಕರ ನೈಜ ಉತ್ಪಾದನೆಯ ಅಗತ್ಯಗಳನ್ನು ಸಮರ್ಪಕವಾಗಿ ಪೂರೈಸಲಾರವು.

**ಪತ್ತಿನ ದರಗಳ ಚಲನಶೀಲತೆ**

ಕೃಷಿ ಪತ್ತಿನ ಪ್ರಮಾಣ, ಉತ್ಪಾದನಾಗತ್ಯಗಳನ್ನು ಸಮರ್ಪಕವಾಗಿ ಪೂರೈಸುವಂತಾಗಲು ಬದಲಾಗುತ್ತಿರುವ ಬೆಲೆಯನ್ನು ಅನುಲಕ್ಷಿಸಿ ಪತ್ತಿನ ದರಗಳನ್ನು ರೂಪಿಸಬೇಕಾಗಿರುತ್ತದೆ. ಇಂದಿನ ಕೃಷಿ ಉಪಯೋಗಿ ಪರಿಕರಗಳ (ಬೀಜ, ರಸಗೊಬ್ಬರ ಇತ್ಯಾದಿ) ಬೆಲೆಗಳು ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಪ್ರತಿ ವರ್ಷವೂ ಪತ್ತಿನ ದರಗಳ ಪ್ರಮಾಣಬದ್ಧ ಪರಿಷ್ಕರಣೆ ಅತ್ಯಂತ ಅನಿವಾರ್ಯವಾಗಿರುತ್ತದೆ. ಬಹಳಷ್ಟು ಜಿಲ್ಲೆಗಳಲ್ಲಿ ಹಿಂದಿನ ಐದು ವರ್ಷಗಳ ಅವಧಿಯಲ್ಲಿ ಒಂದು ಬಾರಿ ಮಾತ್ರ ಪತ್ತಿನ ದರಗಳು ಪರಿಷ್ಕರಿಸಲ್ಪಟ್ಟಿದ್ದು, ಅದೊಂದು ಕೇವಲ ಸೀಮಾಂತ ಮೇಲ್ಮುಖಿ ಪರಿಷ್ಕರಣ (ಮಾರ್ಜಿನಲ್ ಅಪ್‌ವರ್ಡ್ ರಿವಿಜನ್) ಆಗಿರುವುದರಿಂದ ಬೆಲೆ ಏರಿಕೆ ಗತಿಯನ್ನು ತಜ್ಞರ ಸಮಿತಿ ಗಂಭೀರವಾಗಿ ಪರಿಗಣಿಸಿಲ್ಲವೆಂಬುದು ವೇದ್ಯವಾಗುತ್ತದೆ. ಸ್ಥಿರಾತ್ಮಕ ಪತ್ತಿನ ದರಗಳ ಆಧಾರದ ಮೇಲೆ ಲೆಕ್ಕಾಚಾರ ಮಾಡಿ ಕೊಡಮಾಡಿದ ಪತ್ತಿನ ಪ್ರಮಾಣ, ಹೆಚ್ಚುತ್ತಿರುವ ಬೆಲೆಗಳ ಹಿನ್ನೆಲೆಯಲ್ಲಿ ಕೃಷಿಕರ ಅಗತ್ಯಗಳನ್ನು ಸಮರ್ಪಕವಾಗಿ ಪೂರೈಸಲು ವಿಫಲವಾಗುತ್ತವೆ.

ಪತ್ತು ಪ್ರಮಾಣ ಯೋಜನೆಯಲ್ಲಿ ಎದ್ದು ಕಾಣುವ ಈ ನ್ಯೂನತೆಗಳಿಂದ ಬಹು ಸಾಂಸ್ಥಿಕ ಕೃಷಿ ಪತ್ತು ವ್ಯವಸ್ಥೆಯಲ್ಲಿ ಅತ್ಯಂತ ಸೂಕ್ತವಾದ, ಸಿಂಹ ಪಾಲಿನ ಪ್ರಮಾಣವನ್ನು ಪೂರೈಸುತ್ತ ಬಂದಿರುವ ಸಹಕಾರಿ ಕೃಷಿ ಪತ್ತು ವ್ಯವಸ್ಥೆ ರೈತ ಸಮುದಾಯದ ಆವಶ್ಯಕತೆಗಳಿಗೆ ಯೋಗ್ಯ ಪ್ರಮಾಣದ ಪತ್ತನ್ನು ಒದಗಿಸುವಲ್ಲಿ ವಿಫಲವಾಗಿದೆ ಎಂಬುದು ನಿರ್ವಿವಾದ. ಅವಶ್ಯಕತೆಗಿಂತಲೂ ಕಡಿಮೆ ಪ್ರಮಾಣದಲ್ಲಿ ಪತ್ತು ಲಭ್ಯವಾದಾಗ ಅದು ಕೃಷಿಯ ಉದ್ದೇಶಕ್ಕೆ ಬಳಕೆಯಾಗದೆ ಹೋಗುವ ಭಯವಿರುತ್ತದೆ. ಇಂಥ ಕ್ಷೀಣ ಪ್ರಮಾಣದ ಪತ್ತು ಬೇರೆ (ಅನುತ್ಪಾದಕ) ಉದ್ದೇಶಗಳಿಗೆ ಬಳಸುವ ಪ್ರೇರಣೆ ನೀಡಬಹುದು. ಹೀಗೆ ಉದ್ದೇಶಿತ ಬಳಕೆಯಿಂದ ವಿಮುಖಗೊಂಡ ಪತ್ತು ಸಂಪನ್ಮೂಲಗಳ ಸೃಷ್ಟಿಗೆ ಮತ್ತು ಪತ್ತಿನ ಮರುಪಾವತಿಗೆ ಪ್ರೇರಕವಾಗಲಾರದು. ಇದರಿಂದ ಸಹಕಾರಿ ಬ್ಯಾಂಕುಗಳ ಕರಡು ಸಾಲಗಳ ಪ್ರಮಾಣ ಹೆಚ್ಚಾಗಿ ಬ್ಯಾಂಕಿನ ಒಟ್ಟಾರೆ ಹಣಕಾಸಿನ ಸ್ಥಿತಿಗೆ ಸಂಚಕಾರ ಉಂಟಾಗುತ್ತದೆ. ತೀರ ಇತ್ತೀಚಿನ ಕೃಷಿ ಪತ್ತು ಪುನರ್ ಪರಿಶೀಲನಾ ಸಮಿತಿ (ಖುಸ್ರೋ ಕಮಿಟಿ—1989), ತನ್ನ ವರದಿಯಲ್ಲಿ "ನಿಮ್ನ ಪತ್ತು ಪೂರೈಕೆ (ಅಂಡರ್-ಫೈನಾನ್ಸಿಂಗ್) ಬಹಳಷ್ಟು ಸಂದರ್ಭಗಳಲ್ಲಿ ಪತ್ತಿನ ದುರ್ಬಳಕೆಯ ಮತ್ತು ತನ್ಮೂಲಕ ಕರಡು ಸಾಲಗಳ ಹೆಚ್ಚಳಕ್ಕೆ ಕಾರಣೀಭೂತವಾಗಿದೆ" ಎಂಬುದಾಗಿ ಉಲ್ಲೇಖಿಸಿರುವುದು ಗಮನಾರ್ಹ.

ಸಹಕಾರಿ ಪತ್ತು ಪೂರೈಕೆ ಒಂದು ಏಕಕಾಲಿಕ ಕ್ರಿಯೆಯಾಗಿ ಇರದೆ, ಸಾರ್ವಕಾಲಿಕ ನಿರಂತರ ಪ್ರಕ್ರಿಯೆ ಆಗಿದೆ. ಈ ನಿಟ್ಟಿನಲ್ಲಿ ಕೃಷಿ ಅಭಿವೃದ್ಧಿಗೆ ಇನ್ನೂ ಹೆಚ್ಚಿನ ಚಾಲನೆ ದೊರೆಯಬೇಕಾದರೆ ಯೋಗ್ಯ ಪ್ರಮಾಣದ ಪತ್ತು ಪೂರೈಕೆಯಾಗಬೇಕು. ಈ ಯೋಗ್ಯ ಪ್ರಮಾಣದ ಪತ್ತಿನಲ್ಲಿಯೇ ಸಹಕಾರಿ ಬ್ಯಾಂಕುಗಳ ಮತ್ತು ಕೃಷಿಕರ ಸಾಫಲ್ಯ ಅಡಗಿದೆ. ●

---

## ನಮೂನೆ IV


ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳನ್ನು ಕುರಿತ ಹೇಳಿಕೆ
ಪತ್ರಿಕೆಗಳ ನೋಂದಣಿ ಕುರಿತ (ಕೇಂದ್ರದ)
ನಿಯಮಾವಳಿಯ ನಿಯಮ 8ರಂತೆ

**ಪತ್ರಿಕೆಯ ಹೆಸರು :** ಬ್ಯಾಂಕಿಂಗ್ ಪ್ರಪಂಚ

**ಪ್ರಕಟಣೆಯ ಸ್ಥಳ :** ಬೆಂಗಳೂರು 560 002

**ಪ್ರಕಟಣೆಯ ಅವಧಿ :** ತ್ರೈಮಾಸಿಕ

**ಮುದ್ರಕರು :** ಜಿ. ಎಚ್. ಕೃಷ್ಣಮೂರ್ತಿ (ಭಾರತೀಯ), ಮೈಸೂರು ಪ್ರಿಂಟಿಂಗ್ ಪ್ರೆಸ್ 1210, ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು 570 001

**ಪ್ರಕಾಶಕರು :** ಪಾ. ರಾಜಗೋಪಾಲ (ಭಾರತೀಯ), ಪ್ರಧಾನ ಕಾರ್ಯದರ್ಶಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ (ನೋಂ.) 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

**ಸಂಪಾದಕರು :** ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಭಾರತೀಯ), 41 ಆರನೆಯ ಮುಖ್ಯ ರಸ್ತೆ, ಸರಸ್ವತೀಪುರಂ, ಮೈಸೂರು 570 009

**ಪತ್ರಿಕೆಯ ಒಡೆತನ :** ಸಮನ್ವಯ ಸಮಿತಿ (ನೋಂ.) ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು, 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

ಮೇಲೆ ನೀಡಿರುವ ವಿವರಗಳು ನನ್ನ ಸಾಧ್ಯವಾದಮಟ್ಟಿಗಿನ ತಿಳಿವಳಿಕೆ ಮತ್ತು ನಂಬಿಕೆಯ ಪ್ರಕಾರ ಸತ್ಯವಾಗಿವೆಯೆಂದು ನಾನು, ಪಾ. ರಾಜಗೋಪಾಲ, ಈ ಮೂಲಕ ಘೋಷಿಸುತ್ತೇನೆ.

**ಪಾ. ರಾಜಗೋಪಾಲ**
**ಪ್ರಕಾಶಕ**


---

# ಇಸ್ಲಾಮೀ ಹಣಕಾಸು ವ್ಯವಸ್ಥೆಗಳು

ಮೂಲ: ಜಮೀರ್ ಇಕ್ಬಾಲ್
ಭಾಷಾಂತರ: ಅನುಸೂಯಾದೇವಿ, ಎಚ್. ಕೆ.
ಮೈಸೂರು ಬ್ಯಾಂಕು, ಪ್ರಧಾನ ಕಛೇರಿ, ಬೆಂಗಳೂರು–560 009

ಇಸ್ಲಾಮೀ ಹಣಕಾಸು ವ್ಯವಸ್ಥೆಯನ್ನು ಬಡ್ಡಿರಹಿತ ಎಂದು ವ್ಯಾಖ್ಯಾನಿಸುವುದು ಗೊಂದಲ ಉಂಟುಮಾಡುತ್ತದೆ. ಒಟ್ಟಾರೆ ಸಮಾಜದ ಒಳಿತಿಗೆ, ಸಮಾನತೆ ಹಾಗೂ ನ್ಯಾಯವರ್ತನೆಯ ವರ್ಧನೆಗೆ ನೈತಿಕ, ಸಾಮಾಜಿಕ ಹಾಗೂ ಧಾರ್ಮಿಕ ಆಯಾಮಗಳ ಮೇಲೆ ಅದು ಸಮಾನವಾದ ಒತ್ತನ್ನು ನೀಡುತ್ತದೆ.

ಕೆಲವು ಅಂದಾಜುಗಳ ಪ್ರಕಾರ, 45ಕ್ಕೂ ಹೆಚ್ಚು ದೇಶಗಳಲ್ಲಿ 100ಕ್ಕಿಂತ ಹೆಚ್ಚು ಹಣಕಾಸು ಸಂಸ್ಥೆಗಳು ಒಂದಲ್ಲ ಒಂದು ರೂಪದ ಇಸ್ಲಾಮೀ ಹಣಕಾಸನ್ನು ಬಳಸುತ್ತಿವೆ. ಮತ್ತು ಕಳೆದ ಐದು ವರ್ಷಗಳಲ್ಲಿ ವಾರ್ಷಿಕವಾಗಿ ಶೇ. 15ರ ದರದಲ್ಲಿ ಈ ಉದ್ದಿಮೆ ಬೆಳೆಯುತ್ತಿದೆ. 1985ರ ಕೇವಲ 5 ಬಿಲಿಯನ್‌ಗೆ ಹೋಲಿಸಿದಲ್ಲಿ ಪ್ರಸ್ತುತ ಮಾರುಕಟ್ಟೆಯ ವಾರ್ಷಿಕ ಉತ್ಪಾದನೆ 20 ಬಿಲಿಯನ್ ಡಾಲರ್ ಎಂದು ಅಂದಾಜು ಮಾಡಲಾಗಿದೆ ಹಾಗೂ ಈ ಶತಮಾನದ ಕೊನೆಗೆ 100 ಬಿಲಿಯನ್ ಡಾಲರ್ ಮಟ್ಟ ಮುಟ್ಟಬಹುದೆಂದು ಊಹಿಸಲಾಗಿದೆ.

ಇಸ್ಲಾಮೀ ಹಣಕಾಸಿನ ಬೆಳವಣಿಗೆಯು ಮೊದಲು ತೈಲ ರಫ್ತು ಮಾಡುವ ಇಸ್ಲಾಮಿಕ್ ದೇಶಗಳ ಚಾಲ್ತಿ ಖಾತೆಯಲ್ಲಿನ ಆಧಿಕ್ಯದೊಡನೆ ಸಂಘಟಿಸುತ್ತಿತ್ತು. ಆದರೆ ಹ್ರಾಸವಾಗುತ್ತಿರುವ ತೈಲ ಆದಾಯಗಳ ಎದುರಿನಲ್ಲಿ ಇದರ ನಿರಂತರ ಬೆಳವಣಿಗೆ, ಇತರ ಕಾರಕಗಳ ಪರಿಣಾಮವನ್ನು ಬಿಂಬಿಸುತ್ತದೆ. ಅವು ಯಾವುವೆಂದರೆ: ಇಸ್ಲಾಮಿಕ್ ತತ್ವಗಳಾಧಾರಿತ ಸಮಾಜ ರಾಜಕೀಯ ಮತ್ತು ಅರ್ಥವ್ಯವಸ್ಥೆ ಬಗ್ಗೆ ಆಸ್ಥೆ ಹಾಗೂ ಬಲವಾದ ಇಸ್ಲಾಮಿಕ್ ಗುರುತಿಸುಕೊಳ್ಳುವಿಕೆ, ಇದರ ಜೊತೆಗೆ ಹಣಕಾಸು ವ್ಯವಸ್ಥೆಗಳಲ್ಲಿ ಸ್ಥೂಲ ಆರ್ಥಿಕ ಹಾಗೂ ಸಂರಚನಾತ್ಮಕ ಸುಧಾರಣೆಗಳ ಪ್ರವೇಶಿಕೆ, ಬಂಡವಾಳ ಚಲನೆಗಳಲ್ಲಿ ಉದಾರೀಕರಣ, ಖಾಸಗೀಕರಣ ಮತ್ತು ಹಣಕಾಸು ಮಾರುಕಟ್ಟೆಗಳ ವಿಶ್ವವ್ಯಾಪಿ ಸಂಯೋಜನೆ ಇವೆಲ್ಲವೂ ಇಸ್ಲಾಮೀಕ್ ಹಣಕಾಸು ವಿಕಸನಕ್ಕೆ ದಾರಿ ಮಾಡಿಕೊಟ್ಟವು.

### ಇಸ್ಲಾಮೀ ಹಣಕಾಸು ಎಂದರೇನು ?

ಮುಸ್ಲಿಂ ಜಗತ್ತಿನಲ್ಲಿ ಮಧ್ಯಯುಗದಿಂದಲೂ ಇಸ್ಲಾಮೀ ಹಣಕಾಸು ಪ್ರಮುಖವಾಗಿ ಬಳಕೆಯಲ್ಲಿದೆ ಮತ್ತು ವಾಣಿಜ್ಯ ಹಾಗೂ ವ್ಯಾಪಾರ ಚಟುವಟಿಕೆಗಳನ್ನು ಉದರಿ ಅಭಿವೃದ್ಧಿಯೊಂದಿಗೆ ಘೋಷಿಸುತ್ತಾ ಬಂದಿದೆ. ಸ್ಪೈಯಿನ್, ಮೆಡಿಟರೇನಿಯನ್ ಹಾಗೂ ಬಾಲ್ಟಿಕ್ ರಾಜ್ಯಗಳಲ್ಲಿ ಇಸ್ಲಾಮಿಕ್ ವ್ಯಾಪಾರಿಗಳು ವ್ಯಾಪಾರ ಚಟುವಟಿಕೆಗಳಲ್ಲಿ ಅನಿವಾರ್ಯ ಮಧ್ಯವರ್ತಿಗಳಾಗಿದ್ದರು. ವಾಸ್ತವವಾಗಿ ಇಸ್ಲಾಮಿಕ್ ಹಣಕಾಸಿನ ಅನೇಕ ಪರಿಕಲ್ಪನೆಗಳು, ತಂತ್ರಗಳು ಮತ್ತು ಸಂಲೇಖಗಳನ್ನು ಯುರೋಪಿಯನ್ ಹಣಕಾಸುಗಾರರು, ವ್ಯಾಪಾರಿಗಳು ಅನಂತರ ಅಳವಡಿಸಿಕೊಂಡರು. ಇದಕ್ಕೆ ವ್ಯತಿರಿಕ್ತವಾಗಿ, ''ಇಸ್ಲಾಮಿಕ್ ಹಣಕಾಸು ವ್ಯವಸ್ಥೆ'' ಎಂಬ ಪದ ತೀರಾ ಇತ್ತೀಚಿನದು ; 1980ರ ಮಧ್ಯದಲ್ಲಿ ಮಾತ್ರ ಗೋಚರವಾಗುತ್ತದೆ. ವಾಸ್ತವವಾಗಿ, ಇಸ್ಲಾಮೀ ತತ್ವಗಳಿಗೆ ಅನುಗುಣವಾದ ವಾಣಿಜ್ಯಕ ಅಥವಾ ವ್ಯಾಪಾರಿ ಚಟುವಟಿಕೆಗಳ ಮುಂಚಿನ ಎಲ್ಲಾ ಉಲ್ಲೇಖಗಳು ''ಬಡ್ಡಿರಹಿತ'' ಅಥವಾ ''ಇಸ್ಲಾಮಿಕ್ ಬ್ಯಾಂಕಿಂಗ್'' ಛತ್ರದಡಿಯಲ್ಲೇ ರೂಪಿಸಲ್ಪಟ್ಟವು. ಅದಾಗ್ಯೂ ಇಸ್ಲಾಮಿಕ್ ಹಣಕಾಸು ವ್ಯವಸ್ಥೆಯನ್ನು ಕೇವಲ ''ಬಡ್ಡಿರಹಿತ'' ಎಂದು ವರ್ಣಿಸುವುದು, ಸದರಿ ವ್ಯವಸ್ಥೆಯ ಒಟ್ಟಾರೆ ನೈಜ ಚಿತ್ರವನ್ನು ಒದಗಿಸುವುದಿಲ್ಲ. ನಿಸ್ಸಂಶಯವಾಗಿ ಬಡ್ಡಿಯ ಸ್ವೀಕೃತಿ ಮತ್ತು ಪಾವತಿಯ ನಿಷೇಧ, ಈ ವ್ಯವಸ್ಥೆಯ ಕೇಂದ್ರವಾಗಿದೆಯಾದರೂ ಅದು ನಷ್ಟಸಂಭಾವ್ಯತೆಯನ್ನು ಹಂಚಿಕೊಳ್ಳುವುದು, ವೈಯಕ್ತಿಕ ಹಕ್ಕುಗಳು ಮತ್ತು ಕರ್ತವ್ಯಗಳು, ಸ್ವತ್ತುಗಳ ಹಕ್ಕುಗಳು ಮತ್ತು ಕರಾರುಗಳ ಪಾವಿತ್ರ್ಯಗಳಂತಹ ಇತರೆ ಇಸ್ಲಾಮಿಕ್ ತತ್ವಗಳಿಂದ ಅದು ಬೆಂಬಲ ಪಡೆದಿದೆ. ಅದೇ ರೀತಿ ಇಸ್ಲಾಮಿಕ್ ಹಣಕಾಸು ವ್ಯವಸ್ಥೆ ಕೇವಲ ಬ್ಯಾಂಕಿಂಗಿಗೇ ಸೀಮಿತವಾಗಿಲ್ಲ. ಆದರೆ, ಬಂಡವಾಳ ರೂಪಣೆ, ಬಂಡವಾಳ ಮಾರುಕಟ್ಟೆಗಳು ಮತ್ತು ಎಲ್ಲಾ ರೀತಿಯ ಹಣಕಾಸು ಮಧ್ಯವರ್ತಿತ್ವವನ್ನು ಒಳಗೊಳ್ಳುತ್ತದೆ.

ವ್ಯವಸ್ಥೆಯನ್ನು ''ಬಡ್ಡಿರಹಿತ''ವೆಂದು ವ್ಯಾಖ್ಯಾನಿಸುವುದು ಗೊಂದಲವನ್ನುಂಟುಮಾಡುತ್ತದೆ. ಇಸ್ಲಾಮಿಕ್ ಹಣಕಾಸು

ವ್ಯವಸ್ಥೆ, ತಾತ್ತ್ವಿಕ ಬುನಾದಿ, ಉತ್ಪಾದನೆಯ ಕಾರಕಗಳು ಮತ್ತು ಆರ್ಥಿಕ ವರ್ತನೆಗಳ ಪಾರಸ್ಪರಿಕ ಪ್ರಭಾವಗಳಿಗಿಂತ ಆಚೆ ಹೋಗುತ್ತದೆ. ಆದರೆ, ಸಾಂಪ್ರದಾಯಿಕ ಹಣಕಾಸು ವ್ಯವಸ್ಥೆ ಮೂಲತಃ ವಹಿವಾಟುಗಳ ಆರ್ಥಿಕ ಮತ್ತು ಹಣಕಾಸು ಅಂಶಗಳ ಮೇಲೆಯೇ ಕೇಂದ್ರೀಕರಿಸುತ್ತದೆ. ಇಸ್ಲಾಮಿಕ್ ವ್ಯವಸ್ಥೆ ಒಟ್ಟಾರೆ ಸಮಾಜದ ಒಳತಿಗೆ, ಸಮಾನತೆ ಹಾಗೂ ನ್ಯಾಯ ವರ್ತನೆ ಹೆಚ್ಚಿಸಲು, ನೈತಿಕ, ಸಾಮಾಜಿಕ ಹಾಗೂ ಧಾರ್ಮಿಕ ಆಯಾಮಗಳ ಮೇಲೆ ಸಮನಾದ ಒತ್ತನ್ನು ನೀಡುತ್ತದೆ. ಕಾರ್ಯನೀತಿ, ಸಂಪತ್ತಿನ ಹಂಚಿಕೆ, ಸಾಮಾಜಿಕ ಮತ್ತು ಆರ್ಥಿಕ ನ್ಯಾಯ ಹಾಗೂ ರಾಜ್ಯದ ಪಾತ್ರದ ಬಗ್ಗೆ ಇಸ್ಲಾಮೀ ಬೋಧನೆಗಳ ಸಂದರ್ಭದಲ್ಲಿ ಮಾತ್ರ ಈ ವ್ಯವಸ್ಥೆಯನ್ನು ಸಂಪೂರ್ಣವಾಗಿ ಗ್ರಹಿಸಬಹುದು.

ಇಸ್ಲಾಮೀ ಹಣಕಾಸು ವ್ಯವಸ್ಥೆ ಯಾವುದೇ ಪೂರ್ವ ನಿರ್ಧಾರಿತ, ಖಾತರಿಯಾದ ದರದಲ್ಲಿ ಪ್ರತಿಫಲದ ಪಾವತಿ ಅಥವಾ ಸ್ವೀಕೃತಿಯ ಸಂಪೂರ್ಣ ನಿಷೇಧದ ಮೇಲೆಯೇ ಆಧಾರಿತವಾಗಿದೆ. ಇದು ಬಡ್ಡಿಯ ಪರಿಕಲ್ಪನೆಯ ಬಾಗಿಲನ್ನು ಮುಚ್ಚುತ್ತದೆ. ಋಣಾಧಾರಿತ ಸಂಲೇಖಗಳನ್ನು ದೂರವಿಡುತ್ತದೆ. ಈ ಪದ್ಧತಿ ನಷ್ಟದ ಹಂಚಿಕೆಯನ್ನು ಉತ್ತೇಜಿಸುತ್ತದೆ. ಉದ್ಯೋಗಶೀಲತೆಯನ್ನು ಪ್ರವರ್ತಿಸುತ್ತದೆ. ಸಟ್ಟಾ ವರ್ತನೆಯನ್ನು ನಿರುತ್ಸಾಹಗೊಳಿಸುತ್ತದೆ ಮತ್ತು ಕರಾರುಗಳ ಪಾಲನೆಗೆ ಇಂಬುಗೊಡುತ್ತದೆ. (ನೋಡಿ : ಇಸ್ಲಾಮೀ ಹಣಕಾಸು ವ್ಯವಸ್ಥೆಯ ಸಿದ್ಧಾಂತಗಳು.)

ಋಣ ಧನಪೋಷಣೆಯನ್ನು ಹೊರದೂಡುವುದರಿಂದ ಮತ್ತು ವರ್ಧಿತ ಹಂಚಿಕೆಯ ದಕ್ಷತೆಯಿಂದ ಇಸ್ಲಾಮೀ ಹಣಕಾಸು ವ್ಯವಸ್ಥೆ ಸ್ಥಿರವಾಗಿರುತ್ತದೆಂದು ನಿರೀಕ್ಷಿಸಬಹುದು. ಇಸ್ಲಾಮಿಕ್ ಹಣಕಾಸು ಮಧ್ಯವರ್ತಿಗಳಿಗೆ "ಎರಡು ಕಿಂಡಿ" ಮಾದರಿಯನ್ನು ಸೂಚಿಸಲಾಗುತ್ತಿತ್ತು ; ಇದರಲ್ಲಿ ತಗಾದೆ ಠೇವಣಿಗಳು ಶೇ. 100ರಷ್ಟು ಮೀಸಲುಗಳಿಂದ ಬೆಂಬಲಿತವಾಗಿದ್ದವು ಮತ್ತು ವಿನಿಯೋಜನ ಠೇವಣಿಗಳನ್ನು ಸಮ ಹಂಚಿಕೆಯ ಆಧಾರದ ಮೇಲೆಯೇ ಸ್ವೀಕರಿಸಲಾಗುವುದು. ವಿಶ್ಲೇಷಣಾತ್ಮಕ ಮಾದರಿಗಳು ಇಂತಹ ಪದ್ಧತಿ ಸ್ಥಿರವಾಗಿರುತ್ತದೆಂದು ಪ್ರದರ್ಶಿಸಿವೆ. ಏಕೆಂದರೆ, ಬಾಧ್ಯತೆ ಮತ್ತು ಸ್ವತ್ತುಗಳ ಅವಧಿ ಮತ್ತು ಸಂರಚನೆಯನ್ನು ಪ್ರಮಾಣಬದ್ಧವಾಗಿ ಲಾಭ ಹಂಚಿಕೆಯ ವ್ಯವಸ್ಥೆಯ ಮೂಲಕ ಜೋಡಿಸಲಾಗಿರುತ್ತದೆ. ಯಾವುದೇ ಸ್ಥಿರ ಬಡ್ಡಿಯ ವೆಚ್ಚ ಉಂಟಾಗುವುದಿಲ್ಲ ಮತ್ತು ಋಣದ ಮೂಲಕ ಹಣಕಾಸು ನೀಡುವಿಕೆ ಸಾಧ್ಯವಿಲ್ಲ. ವಿನಿಯೋಜನ ಪರ್ಯಾಯಗಳನ್ನು ಅವುಗಳ ಉತ್ಪಾದಕತೆ ಮತ್ತು ನಿರೀಕ್ಷಿತ ಪ್ರತಿಫಲ ದರವನ್ನು ಆಧರಿಸಿ, ಕಟ್ಟುನಿಟ್ಟಾಗಿ ಆಯ್ಕೆ ಮಾಡಲಾಗುವುದರಿಂದ ಹಂಚಿಕೆಯಲ್ಲಿ ದಕ್ಷತೆ ಉಂಟಾಗುತ್ತದೆ. ಉದ್ಯಮಿಗಳು ಹಣಕಾಸು ಬಂಡವಾಳ ಸರಬರಾಜುದಾರಿಕೆ ಅಭಿಕರ್ತೃವಾಗಲು ಸ್ವಾಧೀನಿಸಿರುವುದರಿಂದ, ಅಂತಿಮವಾಗಿ ಉದ್ಯಮಶೀಲತೆಯನ್ನು ಪ್ರೋತ್ಸಾಹಿಸಲಾಗುವುದು. ಪ್ರತಿಯಾಗಿ ಇವರು ಪರಿಯೋಜನೆಗಳನ್ನು ಮತ್ತು ವ್ಯವಸ್ಥಾಪನ ತಂಡಗಳನ್ನು ನಿಕಟವಾಗಿ ಪರಿಶೋಧಿಸುತ್ತಾರೆ.

## ಮೂಲಭೂತ ಸಂಲೇಖಗಳು

ನಿಧಿಗಳನ್ನು ಒದಗಿಸುವವರು ಮತ್ತು ಬಳಕೆದಾರರನ್ನು ಸಂತೃಪ್ತಿಗೊಳಿಸಲು, ಇಸ್ಲಾಮಿಕ್ ಮಾರುಕಟ್ಟೆಗಳು ವಿವಿಧ ಸಂಲೇಖಗಳನ್ನು ಅನೇಕ ವಿಧಾನಗಳಲ್ಲಿ ನೀಡುತ್ತವೆ ; ಆದರೆ, ವಿಕ್ರಯ ವ್ಯಾಪಾರ ಧನಪೋಷಣೆ ಮತ್ತು ವಿನಿಯೋಜನೆ (ಟಿಪ್ಪಣಿ–2) ಮೂಲಭೂತ ಸಂಲೇಖಗಳು, ವೆಚ್ಚ ಸಹಿತ (ಕಾಸ್ಟ್ ಪ್ಲಸ್) ಧನ ಪೋಷಣೆ (ಮುರಾಬಹ), ಲಾಭ ಹಂಚಿಕೆ (ಮುಂದಾರಬ) ಗುತ್ತಿಗೆ ಕಾರ್ಯ (ಇಜಾರ), ಪಾಲುದಾರಿಕೆ (ಮುಶಾರಕ) ಮತ್ತು ವಾಯಿದಾ ಮಾರಾಟ (ಬೇಸಲಾವ್) ಇವುಗಳನ್ನು ಒಳಗೊಳ್ಳುತ್ತದೆ. ಈ ಸಂಲೇಖಗಳು ಸಂಕೀರ್ಣವಾದ ವೈವಿಧ್ಯಮಯ ಹಣಕಾಸು ಸಂಲೇಖಗಳನ್ನು ಅಭಿವೃದ್ಧಿಪಡಿಸುವಲ್ಲಿ ಮೂಲ ಅಡಿಗಲ್ಲುಗಳಾಗಿವೆ. ಇಸ್ಲಾಮಿಕ್ ಹಣಕಾಸು ಮಾರುಕಟ್ಟೆಗಳಲ್ಲಿ ಹಣಕಾಸು ನವೋನ್ಮೇಷ ಮತ್ತು ವಿಸ್ತರಣಕ್ಕೆ ವಿಪುಲವಾದ ಸಾಮರ್ಥ್ಯವಿದೆ ಎಂಬುದನ್ನು ಸೂಚಿಸುತ್ತದೆ.

## ಮಾರುಕಟ್ಟೆ ಪ್ರವೃತ್ತಿಗಳು

ಬ್ಯಾಂಕಿಂಗ್ ಇಸ್ಲಾಮಿಕ್ ಹಣಕಾಸು ವ್ಯವಸ್ಥೆಯ ಅತ್ಯಂತ ಅಭಿವೃದ್ಧಿ ಹೊಂದಿದ ಭಾಗವಾಗಿದೆ. ಉದಾಹರಣೆಗೆ ಇರಾನ್ ಮತ್ತು ಪಾಕಿಸ್ತಾನಗಳ ರಾಜ್ಯ ಸಂವಿಧಾನಗಳು ತಮ್ಮ ಬ್ಯಾಂಕಿಂಗ್ ವ್ಯವಸ್ಥೆಗಳು ಸಂಪೂರ್ಣವಾಗಿ ಇಸ್ಲಾಮಿಕ್ ಕಾನೂನಿಗೆ ಅನುಗುಣವಾಗಿರುವಂತೆ ಅಗತ್ಯಗೊಳಿಸಿವೆ. ಈಜಿಪ್ಟ್, ಇಂಡೋನೇಷಿಯಾ, ಮಲೇಷಿಯಾ, ಸೂಡಾನ್ ಮತ್ತು ಗಲ್ಫ್ ಕೋ ಆಪರೇಷನ್ ಕೌನ್ಸಿಲ್ ದೇಶಗಳಲ್ಲಿ ಸಾಂಪ್ರದಾಯಿಕ ಬ್ಯಾಂಕಿಂಗ್ ಜೊತೆಗೆ ಇಸ್ಲಾಮಿಕ್ ಬ್ಯಾಂಕಿಂಗ್ ಅಸ್ತಿತ್ವದಲ್ಲಿದೆ. ಇಸ್ಲಾಮಿಕ್ ಬ್ಯಾಂಕಿಂಗ್ ಅನ್ನು ಪ್ರಸ್ತುತ ಎರಡು ಮಾರ್ಗಗಳಲ್ಲಿ ಆಚರಿಸಲಾಗುತ್ತಿದೆ. "ವಿಶೇಷೀಕೃತ" ಇಸ್ಲಾಮಿಕ್ ಬ್ಯಾಂಕುಗಳು ಮತ್ತು "ಇಸ್ಲಾಮೀ ಕಿಟಕಿಗಳು" ಎಂಬಂತೆ, ವಿಶೇಷೀಕೃತ ಇಸ್ಲಾಮಿಕ್ ಬ್ಯಾಂಕುಗಳು ವಾಣಿಜ್ಯ ಮತ್ತು ವಿನಿಯೋಜನ ಬ್ಯಾಂಕುಗಳಾಗಿದ್ದು, ಇಸ್ಲಾಮಿಕ್ ತತ್ತ್ವಗಳ ಮೇಲೆ ಸಂಪೂರ್ಣವಾಗಿ ಸಂರಚಿತವಾಗಿವೆ ಮತ್ತು ಇವು ಇಸ್ಲಾಮಿಕ್ ಸಂಲೇಖಗಳಲ್ಲಿ ಮಾತ್ರ ವ್ಯವಹರಿಸುತ್ತವೆ. ಇಸ್ಲಾಮಿಕ್ ಕಿಟಕಿಗಳು, ಇಸ್ಲಾಮಿಕ್ ಬ್ಯಾಂಕಿಂಗ್‌ನಲ್ಲಿ ತೊಡಗಿಸಲು ಇಚ್ಛಿಸುವ ಮುಸ್ಲಿಮರಿಗೆ ಸೇವೆ ಒದಗಿಸಲು ಸಾಂಪ್ರದಾಯಿಕ ಬ್ಯಾಂಕುಗಳು ಕಲ್ಪಿಸಿರುವ ವಿಶೇಷ ಸೌಲಭ್ಯಗಳಾಗಿವೆ. ಪಾಶ್ಚಾತ್ಯ ಮತ್ತು ಇಸ್ಲಾಮಿಕ್ ದೇಶಗಳಲ್ಲಿ ಪ್ರಧಾನ ಕಛೇರಿಗಳನ್ನು ಹೊಂದಿರುವ ಬ್ಯಾಂಕುಗಳು ಇಸ್ಲಾಮಿಕ್ ಕಿಟಕಿ ಸೇವೆಗಳನ್ನು ಒದಗಿಸುತ್ತವೆ.

ಸಾಂಪ್ರದಾಯಿಕವಾಗಿ ವಿಶೇಷೀಕೃತ ಇಸ್ಲಾಮಿಕ್ ಬ್ಯಾಂಕುಗಳು

ಮುಸ್ಲಿಮರಿಂದ ಠೇವಣಿಗಳನ್ನು ಆಕರ್ಷಿಸಲು ಉತ್ತಮ ಸ್ಥಿತಿಯಲ್ಲಿವೆ; ಆದರೆ ಈ ಸಂಸ್ಥೆಗಳು ಸಾಮಾನ್ಯವಾಗಿ ದಕ್ಷತೆಯಿಂದ ವಿನಿಯೋಜಿಸುವ ತಾಂತ್ರಿಕ ಸಾಮರ್ಥ್ಯದ ಕೊರತೆಯನ್ನು ಹೊಂದಿವೆ. ಇಸ್ಲಾಮಿಯರಿಗೆ ಒಪ್ಪಿಗೆಯಾಗುವ ಮಾರ್ಗಗಳಲ್ಲಿ ತ್ವರಿತವಾಗಿ ಮತ್ತು ದಕ್ಷವಾಗಿ ನಿಧಿಗಳನ್ನು ವಿತರಿಸುವ ಪಾಶ್ಚಾತ್ಯ ಬ್ಯಾಂಕುಗಳ ಸೇವೆಗಳು ಈ ಕೊರತೆಯನ್ನು ತುಂಬಿದುವು. ಆದರೆ ಎರಡನೆಯ ಸ್ತರದ ಮಧ್ಯಸ್ತಿಕೆಯ ಕಾರಣದಿಂದಾಗಿ, ಇದು ಅನೇಕ ಸಾರಿ ಇಸ್ಲಾಮಿಕ್ ವಿನಿಯೋಜಕರಿಗೆ ಅಲ್ಪ ಪ್ರತಿಫಲ ತರುವಂಥದ್ದಾಗಿದೆ. ಈ ಪ್ರವೃತ್ತಿ ಬದಲಾಗುತ್ತಿದೆ. ಇಸ್ಲಾಮಿಕ್ ಬ್ಯಾಂಕುಗಳು ಭಾಗಶಃ ಸಂಪನ್ಮೂಲಭರಿತವಾಗುತ್ತಿವೆ ಮತ್ತು ವಿಶ್ವವ್ಯಾಪಿಯಾಗುತ್ತಿವೆ. ಅಂತರರಾಷ್ಟ್ರೀಯ ಮಾರುಕಟ್ಟೆಗಳೊಂದಿಗೆ ಅವುಗಳ ಹೆಚ್ಚುತ್ತಿರುವ ಸಮೀಕರಣದ ಕಾರಣದಿಂದಾಗಿ ಇದು ಸಾಧ್ಯವಾಗುತ್ತಿದೆ. ಅದೇ ಸಮಯದಲ್ಲಿ ಇಸ್ಲಾಮಿಕ್ ಮಾರುಕಟ್ಟೆಗಳ ಭವಸಾಮರ್ಥ್ಯದ ಅರಿವಿರುವ ಪಾಶ್ಚಾತ್ಯ ಬ್ಯಾಂಕುಗಳು, ಮುಸ್ಲಿಂ ದೇಶಗಳಲ್ಲಿರುವ ಇಸ್ಲಾಮಿಕ್ ಬ್ಯಾಂಕುಗಳು ಮತ್ತು ಬ್ಯಾಂಕುಗಳ ಇಸ್ಲಾಮಿಕ್ ಗವಾಕ್ಷಿ ಮುಂತಾದ ಮಧ್ಯಸ್ಥಗಾರರನ್ನು ಬಿಟ್ಟುಬಿಟ್ಟು, ವಿನಿಯೋಜಕರನ್ನು ನೇರವಾಗಿ ಸಂಪರ್ಕಿಸುತ್ತಿವೆ. ಉದಾಹರಣೆಗೆ ಸಿಟಿ ಬ್ಯಾಂಕು ತನ್ನ ಮೊದಲ ಇಸ್ಲಾಮಿಕ್ ಸಹವರ್ತಿ ಬ್ಯಾಂಕನ್ನು 1966ರಲ್ಲಿ ಬಹ್ರೈನ್‌ನಲ್ಲಿ ತೆರೆಯಿತು.

ಚಾರಿತ್ರಿಕವಾಗಿ ಇಸ್ಲಾಮೀ ಹಣಕಾಸು ಮಾರುಕಟ್ಟೆಗಳು, ದ್ರವತ್ವ ವರ್ಧಿಸುವ ಸಂಲೇಖ ರಹಿತವಾಗಿದ್ದವು. ಇದರಿಂದ ಬಹು ಮಟ್ಟಿಗೆ ಸಮರ್ಥ ವಿನಿಯೋಜಕರನ್ನು ಕಡೆಗಣಿಸಿದ್ದವು. ಆದಾಗ್ಯೂ, ಪ್ರತಿಭೂತೀಕರಣದಿಂದಾಗಿ ಹೆಚ್ಚು ದ್ರವತ್ವದ ಸಂಲೇಖಗಳು ಜನ್ಮತಾಳುತ್ತಿವೆ; ಪ್ರಸ್ತುತ ಮಾರುಕಟ್ಟೆಯ ಬಿಲಿಯನ್ ಡಾಲರ್ ಪರಿಮಾಣದ ಇಸ್ಲಾಮಿಕ್ ನಿಧಿಗಳು ಪ್ರತಿಭೂತೀಕರಣದ ಪ್ರಾರಂಭಿಕ ಅನ್ವಯವನ್ನು ಪ್ರತಿನಿಧಿಸುತ್ತವೆ. (ಟಿಪ್ಪಣಿ ನೋಡಿ) ಮೂರು ರೀತಿಯ ಇಸ್ಲಾಮಿಕ್ ನಿಧಿಗಳಿವೆ. ಸಾಮ್ಯ, ಪದಾರ್ಥ (ಕಮಾಡಿಟಿ) ಮತ್ತು ಗುತ್ತಿಗೆ ವ್ಯವಹಾರ. ಇಸ್ಲಾಮಿಕ್ ನಿಧಿಗಳು ಮಾರುಕಟ್ಟೆಯ ಬಹು ದೊಡ್ಡ ಭಾಗವಾದ ಸಾಮ್ಯ ನಿಧಿಗಳು, ಸಾಂಪ್ರದಾಯಿಕ ಪರಸ್ಪರ ನಿಧಿಗಳ ತದ್ರೂಪದವು. ಆದರೆ ನಿರ್ದಿಷ್ಟ ಷೇರುಗಳನ್ನು ಆಯ್ಕೆ ಮಾಡಲು ಅದ್ವಿತೀಯ "ಸೋಸುವ" ಪ್ರಕ್ರಿಯೆಯ ಅಗತ್ಯವಿರುವ, ಇಸ್ಲಾಮಿಕ್ ಗುಣವಿರುವುದಾಗಿದೆ. ಈ ಸೋಸುವ ಪ್ರಕ್ರಿಯೆಯು ನಿಧಿ ವಿನಿಯೋಜಿಸುವ ಪ್ರತಿಯೊಂದು ವ್ಯವಹಾರದ ಮಾದರಿ, ಕಾರ್ಯನಿರ್ವಹಣೆ ಮತ್ತು ಬಂಡವಾಳ ಸಂರಚನೆ ಇಸ್ಲಾಮಿಕ್ ನಿಯಮಗಳಿಗೆ ಅನುಗುಣವಾಗಿದೆ ಎಂದು ಖಚಿತಪಡಿಸಿಕೊಳ್ಳುತ್ತದೆ ಹಾಗೂ ನಿಷೇಧಾತ್ಮಕ ಚಟುವಟಿಕೆಗಳಲ್ಲಿ ತೊಡಗಿರುವ ಕಂಪೆನಿಗಳನ್ನು ಮತ್ತು ಯಾರ ಬಂಡವಾಳ ಸಂರಚನೆ ಋಣವಿಮೋಚನೆಗಾಗಿ ಧನಘೋಷಣೆ ಮಾಡುವುದರ ಮೇಲೆಯೇ ಹೆಚ್ಚಾಗಿ ಅವಲಂಬಿತವಾಗಿರುತ್ತದೆಯೋ ಅಂತಹವರನ್ನು (ಬಡ್ಡಿಯೊಂದಿಗೆ ವ್ಯವಹರಿಸುವುದನ್ನು ತಪ್ಪಿಸಲು) ದೂರವಿಡುತ್ತದೆ. ಈ ಕಾರಣದಿಂದಾಗಿ ಕಡೆಗಣಿಸುವ ಮಟ್ಟದಲ್ಲಿ ಋಣ ವಿಮೋಚನೆಗಾಗಿ ಧನ ಸಹಾಯ (ಶೇ. 10ರಷ್ಟು ಅಥವಾ ಕಡಿಮೆ) ಮಾಡುವ ಕಂಪೆನಿಗಳನ್ನು ಆಯ್ಕೆ ಮಾಡಬಹುದು. ಆದರೆ ಋಣವು ಬಂಡವಾಳ ಸಂರಚನೆಯ ಒಂದು ಸ್ಥಾಯೀ ವ್ಯವಸ್ಥೆಯಾಗಿ ಉಳಿಯಬಾರದು. ಇಸ್ಲಾಮಿಕ್ ಸಾಮ್ಯ ನಿಧಿಯ ಭವಿಷ್ಯ ಕೆಲವೆಡೆಗಳಲ್ಲಿ ಉಜ್ವಲವಾಗಿದೆ. ಏಕೆಂದರೆ – ಈಜಿಪ್ಟ್, ಜೋರ್ಡಾನ್‌ನಂತಹ ಮುಸ್ಲಿಂ ದೇಶಗಳಲ್ಲಿ ಖಾಸಗೀಕರಣದ ಹೊಸ ಅಲೆ ಪ್ರವಹಿಸುತ್ತಿದೆ ಮತ್ತು ಇಂಡೋನೇಷ್ಯಾ ಮತ್ತು ಮಲೇಷಿಯಾದಂತಹ ಹೆಚ್ಚು ಉನ್ನತಿಯಲ್ಲಿರುವ ಇಸ್ಲಾಮಿಕ್ ದೇಶಗಳಲ್ಲಿ ಇಸ್ಲಾಮಿಕ್ ಹಣಕಾಸು ಉತ್ಪನ್ನಗಳಿಗೆ ಬೇಡಿಕೆ ಶೀಘ್ರವಾಗಿ ನಿಧಿಗಳು ಹೆಚ್ಚುತ್ತಿದೆ. ವ್ಯಾಪಾರವಸ್ತು ಮತ್ತು ಗುತ್ತಿಗೆ ಇಸ್ಲಾಮಿಕ್ ನಿಧಿಯ ಇತರ ರೂಪಗಳು. ಪದಾರ್ಥ ನಿಧಿಯನ್ನು ಮೂಲಲೋಹಗಳಲ್ಲಿ ವಿನಿಯೋಜಿಸಲಾಗುತ್ತದೆ. ಗುತ್ತಿಗೆ ನಿಧಿಯನ್ನು ಆಟೋ ಸಲಕರಣೆಗಳು ಹಾಗೂ ವೈಮಾನಿಕ ಗುತ್ತಿಗೆಗಳು ಮತ್ತು ಗುತ್ತಿಗೆಗಳ ಬೆಂಬಲಿತ ವ್ಯವಹಾರ ಸಾಮರ್ಥ್ಯವುಳ್ಳ ಪ್ರಮಾಣ ಪತ್ರ ನೀಡಿಕೆ ಇವುಗಳಲ್ಲಿ ತೊಡಗಿಸಲಾಗುತ್ತದೆ.

ಅಂತರರಾಷ್ಟ್ರೀಯ ಮತ್ತು ಪ್ರಾದೇಶಿಕ ಸಂಸ್ಥೆಗಳು ಇಸ್ಲಾಮೀ ಹಣಕಾಸಿನೊಂದಿಗೆ ಕೆಲಸ ಮಾಡುತ್ತಿವೆ ಮತ್ತು ನಿಷ್ಪನ್ನ ಉತ್ಪಾದನೆಗಳನ್ನು ಪರಿಚಯಿಸಲು ಹಾಗೂ ಯೋಜನಾ ಹಣಕಾಸು ವರ್ಧನೆಗಾಗಿ, ಸಂಘ ರಚಿಸಲು ಉದ್ದೇಶಿಸಿವೆ. ಅಂತರರಾಷ್ಟ್ರೀಯ ಹಣಕಾಸು ನಿಗಮ (ಐಎಫ್‌ಸಿ) ಇಸ್ಲಾಮಿಕ್ ತತ್ತ್ವಗಳನ್ನು ಅಳವಡಿಸಿಕೊಂಡಿರುವ ಮಿಡ್ಲ್ ಪೂರ್ವ ದೇಶಗಳಲ್ಲಿ ಮತ್ತು ಪಾಕಿಸ್ತಾನದಲ್ಲಿ ಅನೇಕ ವ್ಯವಹಾರಗಳನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದೆ. ನಿಷ್ಪನ್ನ ಉತ್ಪಾದನೆಗಳ ಆರಂಭವನ್ನು ತುಂಬಾ ಎಚ್ಚರಿಕೆಯಿಂದ ಗಮನಿಸುತ್ತಿದ್ದಾಗ್ಯೂ, ಇವು ಬಡ್ಡಿಯನ್ನು ಸಂಘಟಿಸಬಹುದು ಹಾಗೂ ಸಟ್ಟಾ ವ್ಯಾಪಾರದ ಚಟುವಟಿಕೆಗಳನ್ನು ಬೆಂಬಲಿಸಬಹುದು ಎಂದು ಶಂಕಿಸಲಾಗಿದೆ, ವಾಯಿದಾ ಕರಾರುಗಳಂತಹ (ಫಾರ್‌ವರ್ಡ್ ಕಾಂಟ್ರಾಕ್ಟ್ಸ್) ಸರಳ ನಿಷ್ಪನ್ನಗಳನ್ನು ಪರೀಕ್ಷಿಸಲಾಗುತ್ತಿದೆ; ಏಕೆಂದರೆ ಅವುಗಳ ಮೂಲಭೂತ ಅಂಶಗಳು, ಮುಂತಳ್ಳಿದ ಮಾರಾಟದ ಇಸ್ಲಾಮಿಕ್ ಸಂಲೇಖದಂತೆಯೇ ಇವೆ. ಸಾಮ್ಯ ಷೇರು ಭಾಗವಹಿಸುವಿಕೆಗೆ ಒತ್ತು ನೀಡುವ ಯೋಜನಾ ಹಣಕಾಸು ವ್ಯವಸ್ಥೆ ಇಸ್ಲಾಮಿಕ್ ಹಣಕಾಸಿಗೆ ಇನ್ನೊಂದು ಸಹಜವಾದ ಹೊಂದಾಣಿಕೆಯಾಗುತ್ತದೆ. ಮಲೇಶಿಯಾದಲ್ಲಿ ಕೈಗಾರಿಕಾ ನಿರ್ಮಾಣದಲ್ಲಿ ದೀರ್ಘಾವಧಿ ಯೋಜನಾ ಹಣಕಾಸು ನೆರವು ನೀಡುವ ಯಶಸ್ವೀ ಪ್ರಯೋಗ ಈ ದಿಶೆಯಲ್ಲಿ ಒಂದು ಧನಾತ್ಮಕ ಬೆಳವಣಿಗೆ.

## ಸಮಸ್ಯೆಗಳು ಮತ್ತು ಸವಾಲುಗಳು

ಇಸ್ಲಾಮೀ ಹಣಕಾಸು ಮಾರುಕಟ್ಟೆಗಳು ತಮ್ಮ ಸಾಮರ್ಥ್ಯ

ಕ್ಕಿಂತ ತುಂಬಾ ಕಡಿಮೆ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿವೆ. ಏಕೆಂದರೆ ಇಸ್ಲಾಮಿಕ್ ಹಣಕಾಸು ವ್ಯವಸ್ಥೆಯು ಇತರ ಆವಶ್ಯಕ ಘಟಕಗಳ ಅನುಪಸ್ಥಿತಿಯಲ್ಲಿ ಇಸ್ಲಾಮಿಕ್ ಬ್ಯಾಂಕಿಂಗ್ ತಾನಾಗೇ ಬೇರೂರಲು ಸಾಧ್ಯವಿಲ್ಲ. ಯಾವುದೇ ದೀರ್ಘಾವಧಿ ವ್ಯೂಹ ನಿರ್ಮಾಣವಾಗಬೇಕಾದರೆ, ಅನೇಕ ನಿರ್ಬಂಧಗಳನ್ನು ಚತುರತೆಯಿಂದ ನಿರ್ವಹಿಸಬೇಕಾಗುತ್ತದೆ.

ಇಸ್ಲಾಮೀ ಹಣಕಾಸು ವ್ಯವಸ್ಥೆಯನ್ನು ಬೆಂಬಲಿಸುವ ಏಕ ರೂಪದ ವಿನಿಮಯ ಮತ್ತು ಕಾನೂನು ಸಮ್ಮತ ರೂಪರೇಷೆಗಳು ಇನ್ನೂ ಅಭಿವೃದ್ಧಿಹೊಂದಿಲ್ಲ. ಇಸ್ಲಾಮೀಕ್ ದೇಶಗಳಲ್ಲಿ ಈಗ ಅಸ್ತಿತ್ವದಲ್ಲಿರುವ ಬ್ಯಾಂಕಿಂಗ್ ವಿನಿಯಮಗಳು ಪಾಶ್ಚಾತ್ಯ ಬ್ಯಾಂಕಿಂಗ್ ಮಾದರಿಯ ಆಧಾರದ ಮೇಲೆ ನಿರೂಪಿತವಾಗಿವೆ. ಅದೇ ರೀತಿ ಇಸ್ಲಾಮಿಕ್ ಹಣಕಾಸು ಸಂಸ್ಥೆಗಳು ಇಸ್ಲಾಮೇತರ ದೇಶಗಳಲ್ಲಿ ವ್ಯವಹಾರವನ್ನು ನಡೆಸುವಾಗ, ಇಸ್ಲಾಮಿಕ್ ತತ್ವಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸುವ ಒಂದು ನಿಯಂತ್ರಣ ವ್ಯವಸ್ಥೆ ಇಲ್ಲದ ಕಾರಣದಿಂದಾಗಿ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಇಸ್ಲಾಮಿಕ್ ಸಂಸ್ಥೆಗಳಿಗೆ ವಿಶಿಷ್ಟವಾದ ನೀಡಿಕೆಗಳನ್ನು ನಿರ್ವಹಿಸುವ ನಿಯಂತ್ರಣಾಧಿಕಾರ ಮತ್ತು ಮೇಲ್ವಿಚಾರಣೆಯ ರೂಪರೇಷೆಗಳ ಅಭಿವೃದ್ಧಿ, ಇಸ್ಲಾಮಿಕ್ ಮಾರುಕಟ್ಟೆಗಳ ಮತ್ತು ಅಂತರರಾಷ್ಟ್ರೀಯ ಹಣಕಾಸು ಮಾರುಕಟ್ಟೆಗಳ ಸಂಯೋಜನೆಯನ್ನು ಮತ್ತಷ್ಟು ವಿಸ್ತರಿಸುತ್ತದೆ.

ಇಸ್ಲಾಮೀ ತತ್ವಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತಿದ್ದೇವೆ ಎಂದು ಹೇಳಿಕೊಳ್ಳಬಲ್ಲ ಒಂದೇ ಒಂದು ದೊಡ್ಡ ಪ್ರಮಾಣದ ಮತ್ತು ಸಂಘಟಿತ ಹಣಕಾಸು ಕೇಂದ್ರ ಇಲ್ಲ. ಮುಂದುವರಿಯುತ್ತಿರುವ ಇಸ್ಲಾಮಿಕ್ ರಾಷ್ಟ್ರಗಳಾದ ಈಜಿಪ್ಟ್, ಜೋರ್ಡಾನ್, ಪಾಕಿಸ್ತಾನಗಳಂತಹ ದೇಶಗಳು ಸ್ಟಾಕ್ ಮಾರುಕಟ್ಟೆ (ದಾಸ್ತಾನು ಮಾರುಕಟ್ಟೆ)ಯಲ್ಲಿ ಸಕ್ರಿಯವಾಗಿ ತೊಡಗಿದ್ದರೂ ಅವುಗಳು ಸಂಪೂರ್ಣವಾಗಿ ಇಸ್ಲಾಮಿಕ್ ತತ್ವಗಳಿಗೆ ಅನುರೂಪವಾಗಿಲ್ಲ. ಇರಾನ್ ಮತ್ತು ಸೂಡಾನ್‌ಗಳಲ್ಲಿ ಸ್ಟಾಕ್ ಮಾರುಕಟ್ಟೆಗಳು ಬಹುಮಟ್ಟಿಗೆ ಇಸ್ಲಾಮಿಕ್ ತತ್ವಗಳಿಗೆ ಅನುಗುಣವಾಗಿ ಕಾರ್ಯನಿರ್ವಹಿಸುತ್ತಿವೆ. ಇದಕ್ಕಿಂತ ಹೆಚ್ಚಾಗಿ, ಇಸ್ಲಾಮಿಕ್ ಉತ್ಪನ್ನಗಳ ಮಧ್ಯಮ ದರ್ಜೆಯ ಮಾರುಕಟ್ಟೆ ತೀರ ದುರ್ಬಲ ಮತ್ತು ಕ್ಷೀಣವಾಗಿದೆ ಮತ್ತು ಅರ್ಥಸಾಧ್ಯತೆಯುಳ್ಳ ಸಂಲೇಖಗಳು ಸದ್ಯದಲ್ಲಿ ದೊರೆಯುತ್ತಿಲ್ಲವಾದ್ದರಿಂದ, ಹಣ ಮಾರುಕಟ್ಟೆಗಳು ಬಹುಮಟ್ಟಿಗೆ ಅಸ್ತಿತ್ವದಲ್ಲೇ ಇಲ್ಲ. ಅಂತರ ಬ್ಯಾಂಕ್ ಮಾರುಕಟ್ಟೆಯ ಅಭಿವೃದ್ಧಿ ಮತ್ತೊಂದು ಸವಾಲು, ನವೀನತೆಯ ನಡಿಗೆ ಮಂದಗತಿಯಲ್ಲಿದೆ. ಅನೇಕ ವರ್ಷಗಳಿಂದ ಮಾರುಕಟ್ಟೆಯಲ್ಲಿ ಅಲ್ಪ ಮತ್ತು ಮಧ್ಯಮ ಅವಧಿಯ ಪರಿಪಕ್ವತೆಯಲ್ಲೇ ಸುತ್ತುವ ಅದೇ ಪಾರಂಪರಿಕ ಸಂಲೇಖಗಳನ್ನು ನೀಡುತ್ತಾ ಬಂದಿದ್ದಾರೆ. ವ್ಯವಹಾರಿಕತೆಗಳಲ್ಲಿ, ಪರಿಪಕ್ವತಾ ಮೌಲ್ಯಗಳನ್ನು ನಿರ್ಧರಿಸುವಂತಹ ಅಗತ್ಯವಿರುವ ಸಂಲೇಖಗಳನ್ನು ಅದು ಇನ್ನೂ ಮಾರುಕಟ್ಟೆಗೆ ತಂದಿಲ್ಲ.

ಕರೆನ್ಸಿ ಮತ್ತು ಪದಾರ್ಥಗಳ ಮಾರುಕಟ್ಟೆಗಳಲ್ಲಿರುವ ಅತಿ ಚಂಚಲತೆಯನ್ನು ತಡೆಗಟ್ಟಲು ಸಂಲೇಖಗಳೊಂದಿಗೆ ಕಕ್ಷಿಗಾರರನ್ನು (ಗ್ರಾಹಕರನ್ನು) (ಕ್ಲೈಯಂಟ್ಸ್) ಸಿದ್ಧಗೊಳಿಸಬೇಕಾದ ಅಪಾಯ ಎದುರಿಸುವ ವ್ಯವಸ್ಥಾಪನ ಉಪಕರಣದ ಅಗತ್ಯವಿದೆ. ಇದರ ಜೊತೆಗೆ ಸಾರ್ವಜನಿಕ ಋಣ ಹಣಕಾಸು ನೆರವಿಗೆ ಅರ್ಥಸಾಧ್ಯ ಪರ್ಯಾಯಗಳನ್ನು ಒದಗಿಸಲು ಅವಶ್ಯವಿರುವ ಸಂಲೇಖಗಳ ಕೊರತೆಯೂ ಮಾರುಕಟ್ಟೆಗಿದೆ.

ಇಸ್ಲಾಮೀ ಹಣಕಾಸು ವ್ಯವಸ್ಥೆಗೆ ಬಲವಾದ ಲೆಕ್ಕ ದಾಖಲೆಯ ಕಾರ್ಯವಿಧಾನಗಳ ಮತ್ತು ಮಾನಕಗಳ ಅಗತ್ಯವಿದೆ. ಪಾಶ್ಚಾತ್ಯ ಲೆಕ್ಕ ದಾಖಲೆಯ ಕಾರ್ಯವಿಧಾನ ಸರಿಹೊಂದುವುದಿಲ್ಲ. ಏಕೆಂದರೆ ಹಣಕಾಸು ಸಂಲೇಖಗಳ ಸ್ವರೂಪ ಮತ್ತು ಚಿಕಿತ್ಸೆ ಭಿನ್ನವಾಗಿದೆ. ಮಾಹಿತಿ ಪ್ರಕಟಣೆಗೆ, ಕಟ್ಟಡ ವಿನಿಯೋಜಕರ ವಿಶ್ವಾಸಗಳಿಕೆಗೆ ಮತ್ತು ನಿಯಂತ್ರಣಕ್ಕೆ ಹಾಗೂ ನಿಗಾವಹಿಸುವುದಕ್ಕೆ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿರುವ ಕಾರ್ಯವಿಧಾನಗಳು ಮತ್ತು ಮಾನಕಗಳು ನಿರ್ಣಾಯವಾಗುತ್ತವೆ. ಸೂಕ್ತವಾದ ಮಾನಕಗಳು ಅಂತರರಾಷ್ಟ್ರೀಯ ಮಾರುಕಟ್ಟೆಯೊಂದಿಗೆ ಇಸ್ಲಾಮಿಕ್ ಹಣಕಾಸು ಮಾರುಕಟ್ಟೆಯ ಸದೃಢತೆಗೆ ನೆರವಾಗುತ್ತವೆ.

ಮಾರುಕಟ್ಟೆಯ ಖಾತೆಗಳನ್ನು ವಿಶ್ಲೇಷಿಸಲು ಮತ್ತು ನಿರ್ವಹಿಸಲು ಹಾಗೂ ಇಸ್ಲಾಮಿಕ್ ಹಣಕಾಸು ತತ್ವಗಳಿಗೆ ಅನುಗುಣವಾಗಿ ನೂತನ ಉತ್ಪನ್ನಗಳನ್ನು ಅಭಿವೃದ್ಧಿಪಡಿಸಲು ಇಸ್ಲಾಮಿಕ್ ಸಂಸ್ಥೆಗಳಲ್ಲಿ ತರಬೇತಿ ಹೊಂದಿದ ಸಿಬ್ಬಂದಿಯ ಕೊರತೆ ಇದೆ. ಕೆಲವು ಸೀಮಿತ ಸಂಖ್ಯೆಯ ಇಸ್ಲಾಮಿಕ್ ಸಂಸ್ಥೆಗಳು ಮಾತ್ರ ತಮ್ಮ ಸಿಬ್ಬಂದಿಗೆ ತರಬೇತಿ ನೀಡಲು ಮತ್ತು ಉತ್ಪನ್ನಗಳನ್ನು ಅಭಿವೃದ್ಧಿಪಡಿಸಲು ಸಂಪನ್ಮೂಲಗಳನ್ನು ವಿಸ್ತಾರಗೊಳಿಸಲು ಶಕ್ತವಾಗಿವೆ.

ಇಸ್ಲಾಮೀ ದೇಶಗಳಲ್ಲಿ ಅನ್ವಯಿಸುತ್ತಿರುವ ಧಾರ್ಮಿಕ ತತ್ವಗಳಲ್ಲಿ ಏಕರೂಪತೆಯ ಕೊರತೆ ಇದೆ. ಸಾರ್ವತ್ರಿಕವಾಗಿ ಒಪ್ಪಿಕೊಂಡಿರುವ ಕೇಂದ್ರೀಯ ಧಾರ್ಮಿಕ ಪ್ರಾಧಿಕಾರದ ಅನುಪಸ್ಥಿತಿಯಲ್ಲಿ, ಇಸ್ಲಾಮಿಕ್ ಬ್ಯಾಂಕುಗಳು ಮಾರ್ಗದರ್ಶನಕ್ಕಾಗಿ ತಮ್ಮದೇ ಆದ ಧಾರ್ಮಿಕ ನಿಯಮಗಳನ್ನು ರೂಪಿಸಿಕೊಂಡಿವೆ. ಪ್ರತಿಯೊಂದು ನೂತನ ಸಂಲೇಖನಕ್ಕೆ ಅನುಮೋದನೆ ಪಡೆಯಲು ಇಸ್ಲಾಮಿಕ್ ಬ್ಯಾಂಕುಗಳು ಸಂಬಂಧಪಟ್ಟ ಧಾರ್ಮಿಕ ನಿಗಮಗಳನ್ನು ಅಥವಾ ಷರಿಯತ್ ಸಲಹೆಗಾರರನ್ನು ಸಂಪರ್ಕಿಸಬೇಕು. ಬೇರೆ ಬೇರೆ ಚಿಂತಕರ ಚಾವಡಿಗಳ ಇಸ್ಲಾಮಿಕ್ ತತ್ವಗಳ ವ್ಯಾಖ್ಯಾನದಲ್ಲಿ ಭಿನ್ನತೆ ಇರುವುದರಿಂದ ಒಂದೇ ರೀತಿ ಹಣಕಾಸು ಸಂಲೇಖಗಳು ಒಂದು ನಿಗಮದಿಂದ ಮಾನ್ಯತೆ ಪಡೆದರೆ, ಇನ್ನೊಂದರಲ್ಲಿ ತಿರಸ್ಕರಿಸಲ್ಪಡುತ್ತವೆ. ಆದ್ದರಿಂದ ಅದೇ ಸಂಲೇಖ ಎಲ್ಲಾ ದೇಶಗಳಲ್ಲಿ ಮಾನ್ಯತೆ ಪಡೆಯದೇ ಹೋಗಬಹುದು. ವಿಭಿನ್ನ ಚಿಂತಕರ ಚಾವಡಿಗಳ ಪ್ರತಿನಿಧಿಗಳನ್ನು ಸೇರಿಸಿ ಏಕರೂಪದ ಪರಿಷತ್ತನ್ನು ರೂಪಿಸಬೇಕು ಮತ್ತು ಅವರು ಸುಸಂಗತವಾದ ನಿಯಮಗಳನ್ನು ಸಿದ್ಧಪಡಿಸಿ, ನೂತನ ಉತ್ಪನ್ನಗಳನ್ನು ಪರಿಚಯಿಸುವ ಪ್ರಕ್ರಿಯೆಯನ್ನು

ಶೀಘ್ರವಾಗಿ ಮುಗಿಸಬೇಕು. ಈ ರೀತಿ ಈ ಸಮಸ್ಯೆಯನ್ನು ನಿಯಂತ್ರಿಸಬಹುದು.

### ಭವಿಷ್ಯದ ದಿಕ್ಸೂಚಿಗಳು

ಇಸ್ಲಾಮಿಕ್ ಹಣಕಾಸು ವ್ಯವಸ್ಥೆಯ ಮುಂದಿನ ಬೆಳವಣಿಗೆ ಮತ್ತು ಅಭಿವೃದ್ಧಿ ಬಹುಮಟ್ಟಿಗೆ ಮಾರುಕಟ್ಟೆಯನ್ನು ಪ್ರವೇಶಿಸಲಿರುವ ನವೋನ್ಮೇಷದ ಸ್ವರೂಪವನ್ನು ಅವಲಂಬಿಸಿರುತ್ತದೆ. ಸಂಲೇಖಗಳನ್ನು ಅಭಿವೃದ್ಧಿಗೊಳಿಸಲು, ದ್ರವತ್ವವನ್ನು ಹೆಚ್ಚಿಸಲು, ಮಧ್ಯಮ ದರ್ಜೆ ಹಣ ಮತ್ತು ಅಂತರ ಬ್ಯಾಂಕ್ ಮಾರುಕಟ್ಟೆಗಳನ್ನು ಅಭಿವೃದ್ಧಿಗೊಳಿಸಲು, ಆಸ್ತಿ ಹೊಣೆಗಾರಿಕೆ ಮತ್ತು ನಷ್ಟ ಸಂಭಾವ್ಯ ವ್ಯವಸ್ಥಾಪನವನ್ನು ನಿರ್ವಹಿಸಲು ಮತ್ತು ಸಾರ್ವಜನಿಕ ಹಣಕಾಸು ಸಂಲೇಖಗಳನ್ನು ಆರಂಭಿಸಲು ಬೇಕಿರುವ ತತ್‌ಕ್ಷಣದ ಅಗತ್ಯವೆಂದರೆ, ಮಾನವ ಮತ್ತು ಹಣಕಾಸು ಸಂಪನ್ಮೂಲಗಳನ್ನು ವಿಸ್ತರಿಸುವುದು. ಇಸ್ಲಾಮಿಕ್ ಹಣಕಾಸು ವ್ಯವಸ್ಥೆ ಸ್ಥೂಲ ಹಣಕಾಸು ಮಟ್ಟದಲ್ಲಿ ಪರ್ಯಾಯಗಳನ್ನು ನೀಡಬಹುದು.

ಪ್ರತಿಭೂತೀಕರಣ ಸರಿಯಾದ ದಿಕ್ಕಿನ ಹೆಜ್ಜೆಯಾದರೂ ಅದಕ್ಕೂ ಕೂಡ ಹೆಚ್ಚಿನ ಕುಶಲತೆಯ ಆವಶ್ಯಕತೆ ಇದೆ. ಪ್ರತಿಭೂತೀಕರಣದ ವ್ಯಾಪ್ತಿಯೆಂದರೆ—ಅದರ ವಿಕ್ರಯ ಸಾಧ್ಯತೆ, ವರ್ಗಾವಣೀಯತೆ ಮತ್ತು ದ್ರವತ್ವವನ್ನು ವಿಸ್ತರಿಸಲು ಹಣಕಾಸು ಆಸ್ತಿಯನ್ನು ವಿಘಟಿಸುವುದು ಮತ್ತು ಪುನಃ ಜೋಡಿಸುವ ಪ್ರಕ್ರಿಯೆ. ಇವೆಲ್ಲವೂ ಇಸ್ಲಾಮಿಕ್ ಹಣಕಾಸು ಮಾರುಕಟ್ಟೆಗಳಲ್ಲಿ ತುಂಬಾ ಆಶಾದಾಯಕವಾಗಿವೆ. ಏಕೆಂದರೆ ಪ್ರಸ್ತುತ ಮಾರುಕಟ್ಟೆ ವ್ಯವಹಾರಗಳು ದ್ರವತ್ವ ಹೆಚ್ಚಿಸುವ ಉತ್ಪನ್ನಗಳ ಅಭಾವದಿಂದ ಸೀಮಿತಗೊಳಿಸಲ್ಪಟ್ಟಿವೆ. ಮಧ್ಯಮ ದರ್ಜೆಯ ಮಾರುಕಟ್ಟೆಗಳ ಆಳ ಮತ್ತು ವಿಸ್ತಾರಗಳ ಕೊರತೆ ಇದೆ ಮತ್ತು ಇವೆಲ್ಲಕ್ಕಿಂತ ಮುಖ್ಯವಾಗಿ ಆಸ್ತಿಹೊಣೆಗಾರಿಕೆ ವ್ಯವಸ್ಥಾಪನೆಗೆ ಸಂಲೇಖಗಳ ಅಸ್ತಿತ್ವವೇ ಇಲ್ಲ. ಪ್ರತಿಭೂತೀಕರಣವನ್ನು ವಿಸ್ತರಿಸುವುದರಿಂದ, ಗ್ರಾಹಕ ಆಧಾರಿತ ಇಸ್ಲಾಮಿಕ್ ಹಣಕಾಸು ವ್ಯವಸ್ಥೆ ಸಾಂಸ್ಥಿಕ ವಿನಿಯೋಜನದಾರರ ರೂಪದಲ್ಲಿ ಬೆಳೆಯುತ್ತದೆ. ಪರಿಪಕ್ವತಾ ಸಂರಚನೆಗಳನ್ನು ವಿಸ್ತರಿಸಲು ಮಾರ್ಗ ದೊರೆತಂತಾಗುತ್ತದೆ ಹಾಗೂ ಮಾರುಕಟ್ಟೆಯಿಂದ ಆಕರ್ಷಣೆ ದೊರಕುತ್ತದೆ. ಮಧ್ಯಮ ದರ್ಜೆಯ ಮಾರುಕಟ್ಟೆ ಅಭಿವೃದ್ಧಿ ಹೊಂದುತ್ತದೆ ಮತ್ತು ಆಸ್ತಿಹೊಣೆಗಾರಿಕೆ ವ್ಯವಸ್ಥಾಪನ ಅಸ್ತಿತ್ವಕ್ಕೆ ಬರುತ್ತದೆ. ಆದರ ನಗದು ಹಲವು ಸಹಭಾಗಿತ್ವದ ಸ್ವರೂಪದ್ದಾದ್ದರಿಂದ, ಪ್ರತಿಭೂತೀಕರಣಕ್ಕೆ ಇತರ ಪ್ರಬಲ ಸ್ಪರ್ಧಿಗಳಾದ ಸ್ಥಿರ ಸಂಪದ ಗುತ್ತಿಗೆ ವ್ಯವಹಾರ ವಾಣಿಜ್ಯ ಸ್ವೀಕೃತಿಗಳನ್ನು ಒಳಗೊಳ್ಳುತ್ತದೆ.

ಇಸ್ಲಾಮಿ ಹಣಕಾಸಿಗೆ ಅನ್ವಯವಾಗುವ ಇನ್ನೊಂದು ಅಂಶವೆಂದರೆ ಸ್ಥೂಲ ಹಣಕಾಸು ಇಸ್ಲಾಮಿಕ್ ಹಣಕಾಸು ಉದ್ಯಮಶೀಲತೆಯನ್ನು ಹಾಗೂ ನಷ್ಟಸಂಭಾವ್ಯ ಹಂಚುವಿಕೆಯನ್ನು ಉತ್ತೇಜಿಸುತ್ತದೆ ಹಾಗೂ ಅದನ್ನು ಬಡವರಿಗಾಗಿ ವಿಸ್ತರಿಸುವುದು ಪರಿಣಾಮಕಾರಿ ಅಭಿವೃದ್ಧಿ ಉಪಕರಣವಾಗುತ್ತದೆ. ಸಾಮಾಜಿಕ ಪ್ರಯೋಜನಗಳು ಸ್ಪಷ್ಟವಾಗಿಯೇ ಇದೆ. ಏಕೆಂದರೆ ಪ್ರಸ್ತುತದಲ್ಲಿ ನೀಡಿಕೆದಾರರು ಬಡವರನ್ನು ಆಗಾಗ್ಗೆ ದುಬಾರಿ ದರಗಳಿಂದ ಶೋಷಿಸುವುದುಂಟು. ಉದ್ದೇಶಪೂರ್ವಕವಾಗಿ ಬಡ್ಡಿ ಆಧಾರಿತ ಹಣಕಾಸು ಮಾರ್ಗಗಳ ಹೊರಗಿಟ್ಟಿರುವ ಸೂಕ್ತ ಉಳಿತಾಯಗಳನ್ನು ಸಂಘಟಿಸುವುದರಿಂದ ಮತ್ತು ಬಂಡವಾಳ ಮಾರುಕಟ್ಟೆಗಳಿಗೆ ಸೌಲಭ್ಯವನ್ನು ಕಲ್ಪಿಸುವುದರ ಮೂಲಕ ಇಸ್ಲಾಮಿಕ್ ಹಣಕಾಸು ವ್ಯವಸ್ಥೆ ಇಸ್ಲಾಮಿಕ್ ದೇಶಗಳ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಬಹುದು. ಇದೇ ಸಮಯದಲ್ಲಿ ಆ ರೀತಿಯ ವ್ಯವಸ್ಥೆಯ ಅಭಿವೃದ್ಧಿ ಉಳಿತಾಯಗಾರರು ಮತ್ತು ಸಾಲಗಾರರು ತಮ್ಮ ವ್ಯಾಪಾರದ ಅಗತ್ಯಗಳು, ಸಾಮಾಜಿಕ ಮೌಲ್ಯಗಳು ಮತ್ತು ಧಾರ್ಮಿಕ ನಂಬಿಕೆಗಳಿಗೆ ಅನುಗುಣವಾಗಿ ಹಣಕಾಸು ಸಂಲೇಖಗಳನ್ನು ಆಯ್ಕೆ ಮಾಡಿಕೊಳ್ಳಲು ಅನುವುಮಾಡಿಕೊಡುತ್ತದೆ.

## ಟಿಪ್ಪಣಿ—1

### ಇಸ್ಲಾಮಿ ಹಣಕಾಸು ವ್ಯವಸ್ಥೆಯ ಸಿದ್ಧಾಂತಗಳು

ಇಸ್ಲಾಮಿ ಹಣಕಾಸು ವ್ಯವಸ್ಥೆಯೊಂದರ ಮೂಲಭೂತ ಚೌಕಟ್ಟು, ನಿಯಮಗಳು ಮತ್ತು ಕಾನೂನುಗಳ ಒಂದು ಗುಂಪು. ಅದನ್ನು ಒಟ್ಟಾರೆಯಾಗಿ ಷರಿಯತ್ ಎಂದು ಗುರುತಿಸಲಾಗುತ್ತದೆ. ಇದು ಇಸ್ಲಾಮಿಕ್ ಸಮಾಜಗಳ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ವಿಷಯಗಳನ್ನು ನಿಬಂಧಿಸುತ್ತದೆ. ಷರಿಯತ್, ಕುರಾನ್, ಮತ್ತು ಅದರ ಅಭ್ಯಾಸಗಳಿಂದ ಆದೇಶಿಸಲ್ಪಟ್ಟ ನಿಯಮಗಳ ಮೂಲದಿಂದಲೇ ರೂಪುಗೊಂಡಿದೆ ಮತ್ತು ವಿವರಣೆಗಳನ್ನು (ಸಾಮಾನ್ಯವಾಗಿ ಸುನ್ನಾಹ ಎಂದೇ ಗುರುತಿಲ್ಪಟ್ಟಿದೆ) ಪ್ರವಾದಿ ಮಹಮ್ಮದ್ ಮಾಡಿದ್ದಾರೆ. ನಿಯಮಗಳ ಮುಂದಿನ ವಿಶದವಾದ ವಿವರಣೆಯನ್ನು ಇಸ್ಲಾಮಿಕ್ ಪಂಡಿತರು ಕುರಾನ್ ಮತ್ತು ಸುನ್ನಾಹನ ಚೌಕಟ್ಟಿನೊಳಗೇ ಒದಗಿಸಿದ್ದಾರೆ. ಇಸ್ಲಾಮಿಕ್ ಹಣಕಾಸು ವ್ಯವಸ್ಥೆಯ ಸಿದ್ಧಾಂತಗಳನ್ನು ಈ ಮುಂದಿನಂತೆ ಸಂಗ್ರಹಿಸಬಹುದು.

### ಬಡ್ಡಿಯ ನಿಷೇಧ : ರಿಬಾದ ನಿಷೇಧ

ಈ ಉಕ್ತಿಯ ಅಕ್ಷರಶಃ ಅರ್ಥ "ಅಧಿಕ." ಇದನ್ನು ಸಾಲಗಳು ಅಥವಾ ಮಾರಾಟಗಳು (ಹೆಚ್ಚುವರಿ) ಯಾವುದೇ ಆಗಲಿ, ಬಂಡವಾಳದ ಯಾವುದೇ ಅನ್ಯಾಯಯುತ ಹೆಚ್ಚಳ ಎಂದು ಅರ್ಥೈಸಲಾಗಿದೆ. ಇದೇ ಈ ವ್ಯವಸ್ಥೆಯ ಕೇಂದ್ರ ಸಿದ್ಧಾಂತ. ಇನ್ನೂ ಖಚಿತಪಡಿಸಬೇಕೆಂದರೆ, ಯಾವುದೇ ಪರಿಪಕ್ವತೆಗೆ ಮತ್ತು ಅಸಲಿನ ಮೊಬಲಗಿಗೆ ಧನಾತ್ಮಕ, ನಿಗದಿತ, ಪೂರ್ವ ನಿಶ್ಚಿತ ದರದ ನಿರ್ಧಾರ (ಅಂದರೆ ಖಾತರಿಗೊಂಡ ಆಧಾರವಿಲ್ಲದ ಬಂಡವಾಳದ ನಿರ್ವಹಣೆ) ವನ್ನು ರಿಬಾ ಎಂದು ಪರಿಗಣಿಸಲಾಗುತ್ತದೆ ಮತ್ತು ಅದನ್ನು

ನಿಷೇಧಿಸಲಾಗಿದೆ. ಕೇವಲ ದಂಬಾರಿ ಬಡ್ಡಿಯನ್ನಷ್ಟೇ ಅಲ್ಲದೆ, ವ್ಯಾಪಕವಾಗಿ ಅಭ್ಯಾಸದಲ್ಲಿರುವ ಬಡ್ಡಿಯನ್ನು ಪ್ರತ್ಯಯಂಗೊಳಿಸುವುದೂ ರಿಬಾದ ವ್ಯಾಪ್ತಿಯೊಳಗೆ ಬರುತ್ತದೆ ಎಂಬುದು ಸಾಮಾನ್ಯವಾಗಿ ಇಸ್ಲಾಮಿಕ್ ಪಂಡಿತರ ಒಟ್ಟು ಅಭಿಪ್ರಾಯವಾಗಿದೆ. ಈ ನಿಷೇಧವು ಸಾಮಾಜಿಕ ನ್ಯಾಯ, ಸಮಾನತೆ, ಆಸ್ತಿ ಹಕ್ಕುಗಳ ವಾದದ ಮೇಲೆ ಆಧಾರಿತವಾಗಿದೆ. ಇಸ್ಲಾಮ್ ಬಡ್ಡಿ ಗಳಿಕೆಯನ್ನು ಪ್ರೋತ್ಸಾಹಿಸುತ್ತದೆ. ಆದರೆ ಬಡ್ಡಿ ವಿಧಿಸುವುದನ್ನು ನಿಷೇಧಿಸುತ್ತದೆ. ಏಕೆಂದರೆ ಲಾಭಗಳು ನಿಶ್ಚಿತ (ಎಕ್ಸ್‌ಪೋಸ್ಟ್) ಯಶಸ್ವೀ ಉದ್ಯಮಶೀಲತೆಯನ್ನು ಮತ್ತು ಹೆಚ್ಚುವರಿ ಆದಾಯದ ಸೃಷ್ಟಿಯನ್ನು ಪ್ರತಿನಿಧಿಸುತ್ತವೆ. ಹಾಗೆಯೇ ಬಡ್ಡಿ, ನಿಶ್ಚಿತ ಎಕ್ಸ್ ಆಂಟೀ ಅಂದರೆ ವ್ಯಾಪಾರದ ಕಾರ್ಯಾಚರಣೆಯ ಫಲಾಫಲ ಏನೇ ಇರಲಿ ಅದರಿಂದ ಉಂಟಾದ ವೆಚ್ಚ ಮತ್ತು ವ್ಯಾಪಾರದಲ್ಲೇನಾದರೂ ನಷ್ಟವಾದರೆ ಯಾವುದೇ ಸಂಪತ್ತು ಸೃಷ್ಟಿಯಾಗುವುದಿಲ್ಲ. ಸಾಲಗಾರರು ಹಾಗೂ ಸಾಲ ನೀಡುವವರು ಇಬ್ಬರೂ ಪ್ರತಿಫಲಗಳು ಹಾಗೂ ನಷ್ಟಗಳನ್ನು ಒಂದು ಸಮಾನತೆಯ ರೀತಿಯಲ್ಲಿ ಹಂಚಿಕೊಳ್ಳಬೇಕು ಮತ್ತು ಸಂಪತ್ತಿನ ಶೇಖರಣೆ ಹಾಗೂ ಆರ್ಥಿಕ ವ್ಯವಸ್ಥೆಯ ವಿತರಣೆ ಸಮರ್ಪಕವಾಗಿರಬೇಕು ಮತ್ತು ನಿಜವಾದ ಉತ್ಪಾದತೆಯ ಪ್ರತಿನಿಧಿಯಾಗಿರಬೇಕು.

### ನಷ್ಟಸಂಭಾವ್ಯತೆಯ ಹಂಚಿಕೆ

ಬಡ್ಡಿಯನ್ನು ನಿಷೇಧಿಸಿರುವುದರಿಂದ, ನಿಧಿಯನ್ನು ಒದಗಿಸುವವರು ಸಾಲಿಗರಾಗುವ ಬದಲಾಗಿ ಹೂಡಿಕೆದಾರರಾಗುತ್ತಾರೆ. ಹಣಕಾಸು ಬಂಡಾವಾಳವನ್ನು ಒದಗಿಸುವವನು ಮತ್ತು ಉದ್ದಿಮೆದಾರ ವ್ಯಾಪಾರದ ನಷ್ಟಸಂಭಾವ್ಯತೆಯನ್ನು ಹಂಚಿಕೊಳ್ಳುತ್ತಾರೆ; ಪ್ರತಿಫಲವಾಗಿ ಲಾಭಗಳನ್ನು ಹಂಚಿಕೊಳ್ಳುತ್ತಾರೆ.

### "ಸಂಭಾವ್ಯ" ಬಂಡವಾಳವಾಗಿ ಹಣ

ಹಣವನ್ನು "ಸಂಭಾವ್ಯ" ಬಂಡವಾಳ ಎಂದು ಪರಿಗಣಿಸಲಾಗುತ್ತದೆ—ಅಂದರೆ ಅದು ಇತರ ಸಂಪನ್ಮೂಲಗಳ ಜೊತೆ ಸೇರಿಕೊಂಡು ಉತ್ಪಾದನ ಚಟುವಟಿಕೆಗಳಲ್ಲಿ ತೊಡಗಿಕೊಂಡಾಗ, ವಾಸ್ತವ ಬಂಡವಾಳವೇ ಆಗಿಬಿಡುತ್ತದೆ. ಹಣ ಬಂಡವಾಳವಾಗಿ ವರ್ತಿಸಿದಾಗ ಮಾತ್ರ ಇಸ್ಲಾಮ್ ಹಣದ ಸಮಯ ಮೌಲ್ಯವನ್ನು ಗುರುತಿಸುತ್ತದೆಯೇ ಹೊರತು ಅದು "ಸಂಭಾವ್ಯ" ಬಂಡವಾಳವಾದಾಗ ಅಲ್ಲ.

### ಸಟ್ಟಾ ವ್ಯಾಪಾರದ ನಡವಳಿಕೆಯ ನಿಷೇಧ

ಇಸ್ಲಾಮಿ ಹಣಕಾಸು ವ್ಯವಸ್ಥೆಯು ಕೂಡಿಡುವುದನ್ನು ಉತ್ತೇಜಿಸುವುದಿಲ್ಲ ಮತ್ತು ವಿಪರೀತ ಅನಿಶ್ಚಿತತೆ, ಜೂಜಾಡುವುದು ಮತ್ತು ನಷ್ಟಸಂಭಾವ್ಯತೆಯನ್ನು ರೂಪಿಸುವಂತಹ ವ್ಯವಹಾರಗಳನ್ನು ನಿಷೇಧಿಸುತ್ತದೆ.

### ಕರಾರುಗಳ ಪಾವಿತ್ರ್ಯ

ಇಸ್ಲಾಂ ಕರಾರಿನ ಹೊಣೆಗಳನ್ನು ಮತ್ತು ಮಾಹಿತಿಗಳನ್ನು ಬಹಿರಂಗಗೊಳಿಸುವುದನ್ನು ಪವಿತ್ರ ಕರ್ತವ್ಯವೆಂಬಂತೆ ಎತ್ತಿ ಹಿಡಿಹಿಡಿಯುತ್ತದೆ. ಅಸಮ ಪ್ರಮಾಣದ ಮಾಹಿತಿ ಮತ್ತು ಅಪಾಯಕರ ನೀತಿಯ ನಷ್ಟಸಂಭಾವ್ಯತೆಯನ್ನು ಕಡಿಮೆಗೊಳಿಸಲು ಈ ಲಕ್ಷಣವು ಉದ್ದೇಶಿಸಿದೆ.

### ಷೆರಿಯತ್ ಅನುಮೋದಿತ ಚಟುವಟಿಕೆಗಳು

ಷೆರಿಯತ್ ನಿಯಮಗಳನ್ನು ಉಲ್ಲಂಘಿಸದಂತಹ ವ್ಯವಹಾರ ಚಟುವಟಿಕೆಗಳು ಮಾತ್ರ ವಿನಿಯೋಜನೆಗೆ ಅರ್ಹವಾಗುತ್ತವೆ. ಉದಾಹರಣೆಗೆ: ಮದ್ಯ, ಜೂಜಾಡುವುದು ಮತ್ತು ಇಸ್ಪೀಟಾಟ—ಇಂತಹವುಗಳನ್ನು ನಡೆಸುವ ವ್ಯವಹಾರಗಳಲ್ಲಿ ಯಾವುದೇ ವಿನಿಯೋಜನೆಯನ್ನು ನಿಷೇದಿಸಲಾಗಿದೆ.

## ಟಿಪ್ಪಣಿ—2

### ಇಸ್ಲಾಮಿಕ್ ಹಣಕಾಸು ಮಾರುಕಟ್ಟೆಗಳ ಕೆಲವು ಹೆಚ್ಚು ಜನಪ್ರಿಯ ಸಂಲೇಖಗಳೆಂದರೆ:

### ವಾಣಿಜ್ಯ ಅಥವಾ ವೆಚ್ಚ ಸಹಿತ ಮಾರಾಟ

ಅಲ್ಪಾವಧಿ ಹಣಕಾಸಿಗಾಗಿ ಬಹುವ್ಯಾಪಕವಾಗಿ ಬಳಸುವ ಸಂಲೇಖಗಳಲ್ಲೊಂದೆಂದರೆ ಹಣಕಾಸು ಖರೀದಿಯ ಸಾಂಪ್ರದಾಯಿಕ ಭರವಸೆಯ ಮೇಲೆ ಆಧಾರವಾಗಿರುವುದು. ಸುಮಾರು ಶೇ. 75ರಷ್ಟು ಇಸ್ಲಾಮಿಕ್ ಹಣಕಾಸು ವ್ಯವಹಾರಗಳು ವೆಚ್ಚ ಸಹಿತ ಮಾರಾಟಗಳು.

### ಗುತ್ತಿಗೆ ನೀಡುವಿಕೆ (ಇಜಾರ)

ಸುಮಾರು ಶೇ. 10ರಷ್ಟಿರುವ ಇಸ್ಲಾಮಿಕ್ ಹಣಕಾಸು ವ್ಯವಹಾರಗಳಲ್ಲಿರುವ ಇನ್ನೊಂದು ಜನಪ್ರಿಯ ಸಂಲೇಖವೆಂದರೆ ಗುತ್ತಿಗೆ ನೀಡುವುದು. ವಾಹನಗಳು, ಯಂತ್ರಗಳು, ಸಲಕರಣೆ ಮತ್ತು ಏರ್‌ಕ್ರಾಫ್ಟ್‌ಗಳಲ್ಲಿ ಹಣಕಾಸು ನೀಡಲು ಗುತ್ತಿಗೆ ನೀಡುವಿಕೆಯನ್ನು (ಲೀಸಿಂಗ್) ರೂಪಿಸಲಾಗಿದೆ. ವಿವಿಧ ರೀತಿಯ ಗುತ್ತಿಗೆ ನೀಡಿಕೆಗೆ ಅವಕಾಶವುಂಟು. ಕಂತು ಪಾವತಿಯ ಒಂದು ಭಾಗ ಅಂತಿಮ ಖರೀದಿಗೆ ಹೋಗುವಂತಹ (ಗುತ್ತಿಗೆದಾರನಿಗೆ ಒಡೆತನ ವರ್ಗಾವಣೆಯಾಗುವುದರೊಂದಿಗೆ) ಗುತ್ತಿಗೆಗಳು ಸೇರಿದಂತೆ ವಿವಿಧ ರೀತಿಯ ಗುತ್ತಿಗೆ ನೀಡಿಕೆಗೆ ಅವಕಾಶವುಂಟು.

### ಲಾಭ ಹಂಚಿಕೆ ಒಪ್ಪಂದ (ಮುದರಬ)

ಇದು ವ್ಯವಸ್ಥಾಪಕರೇ ಸಂಗ್ರಹಿತ ನಿಧಿಗಳಲ್ಲಿ ತೊಡಗುವ ಬಂಡವಾಳ ಹೂಡಿಕೆ ನಿಧಿಯ ತದ್ರೂಪವಾಗಿದೆ. ಅಭಿಕರ್ತ ವ್ಯವಸ್ಥಾಪಕ ನೇಮಿಸಿದ ಹೊಣೆಗಳನ್ನು ಹೊಂದಿರುತ್ತಾನೆ. ಆದರೆ

ಕಾರ್ಯನಿರ್ವಹಿಸಲು ಸಾಕಷ್ಟು ಉತ್ತೇಜನವಿರುತ್ತದೆ. ಬಂಡವಾಳವನ್ನು ವ್ಯಾಪಕವಾಗಿ ಗೊತ್ತು ಮಾಡಲಾದ ಚಟುವಟಿಕೆಗಳಲ್ಲೇ ವಿನಿಯೋಜಿಸಲಾಗುತ್ತದೆ ಮತ್ತು ಪ್ರತಿ ವಿನಿಯೋಜನೆಗೂ ಲಾಭ ಮತ್ತು ನಷ್ಟಸಂಭಾವ್ಯವನ್ನು ಹಂಚಿಕೊಳ್ಳುವ ಷರತ್ತುಗಳು ರೂಢಿಗತವಾಗಿವೆ. ಪರಿಪಕ್ವತೆಯ ಸಂರಚನೆ ಅಲ್ಪಾವಧಿಯಿಂದ ಮಧ್ಯಮಾವಧಿಯ ವರೆಗೆ ವ್ಯಾಪಿಸಿರುತ್ತದೆ ಮತ್ತು ವಾಣಿಜ್ಯ ಚಟುವಟಿಕೆಗಳಿಗೆ ಇದು ಹೆಚ್ಚು ಸೂಕ್ತವಾಗಿದೆ.

### ಸಾಮ್ಯ ಭಾಗವಹಿಸುವಿಕೆ (ಮುಷಾರಕ)

ಇದು ಒಂದು (ಅಭಿಜಾತ) ಶಾಸ್ತ್ರೀಯ ಜಂಟಿ ಸಾಹಸಕ್ಕೆ ಸದೃಶವಾದುದಾಗಿದೆ. ಉದ್ದಿಮೆದಾರರು ಮತ್ತು ವಿನಿಯೋಜಿತರು ಇಬ್ಬರೂ ಕಾರ್ಯನಿರ್ವಹಣೆಯ ಬಂಡವಾಳಕ್ಕೆ (ಆಸ್ತಿಗಳು) ತಾಂತ್ರಿಕ ಮತ್ತು ವ್ಯವಸ್ಥಾಪನೀಯ ತಜ್ಞತೆ, (ದುಡಿಯುವ ಬಂಡವಾಳ ಇತ್ಯಾದಿ) ವಿವಿಧ ಸ್ತರಗಳಲ್ಲಿ ಕಾಣಿಕೆ ನೀಡುತ್ತಾರೆ ಮತ್ತು ಪ್ರತಿಫಲ (ಹಾಗೂ ನಷ್ಟ ಸಂಭಾವ್ಯತೆಯನ್ನು) ಮುಂಚಿತವಾಗಿಯೇ ಒಪ್ಪಿತವಾಗಿರುವ ಪ್ರಮಾಣಾನುಸಾರವಾಗಿ ಹಂಚಿಕೊಳ್ಳಲು ಒಪ್ಪುತ್ತಾರೆ.ಸಾಂಪ್ರದಾಯಿಕವಾಗಿ, ಈ ರೀತಿಯ ವ್ಯವಹರಣೆಯು ಮಧ್ಯಮಾವಧಿ ಹಾಗೂ ದೀರ್ಘಾವಧಿ ಕಾಲಾವಧಿಯ ನಿಶ್ಚಿತ ಆಸ್ತಿಗಳು ಮತ್ತು ದುಡಿಯುವ ಬಂಡವಾಳಕ್ಕೆ ಹಣಕಾಸು ನೆರವು ನೀಡುವಲ್ಲಿ ಬಳಸಲಾಗುತ್ತದೆ.

### ಮಾರಾಟಗಳ ಕರಾರುಗಳು

ಮುಂದೂಡಲ್ಪಟ್ಟ (ಮುಂದೂಡಿದ) ಪಾವತಿ ಮಾರಾಟ (ಬೇ'ಯು' ಅಜ್ಜಾಲ್) ಮತ್ತು ಮುಂದೂಡಲ್ಪಟ್ಟ ಬಟವಾಡೆ ಮಾರಾಟ (ಬೇ 'ಸಲಾಮ್') ಕರಾರುಗಳನ್ನು ಜೊತೆಗೆ ಸ್ಥಳದಲ್ಲೇ ಮಾರಾಟಗಳನ್ನು ಉದರಿ ಮಾರಾಟಗಳನ್ನು ನಡೆಸುವಾಗ ಬಳಸಲಾಗುತ್ತದೆ. ಮುಂದೂಡಿದ ಪಾವತಿ ಮಾರಾಟದಲ್ಲಿ ಉತ್ಪನ್ನದ ಬಟವಾಡೆಯನ್ನು ಸ್ಥಳದಲ್ಲಿಯೇ ತೆಗೆದುಕೊಳ್ಳಲಾಗುತ್ತದೆ. ಆದರೆ ಪಾವತಿಯ ಬಟವಾಡೆಯನ್ನು ಒಪ್ಪಂದವಾಗಿರುವ ಅವಧಿಯ ವರೆಗೆ ವಿಳಂಬಿಸಲಾಗುತ್ತದೆ. ಪಾವತಿಯನ್ನು ಒಟ್ಟಾಗಿ ಅಥವಾ ಕಂತುಗಳಲ್ಲಿ ಮಾಡಬಹುದು. ಆದರೆ ಈ ವಿಳಂಬಕ್ಕೆ ಅಧಿಕ ದಂಡವನ್ನು ವಿಧಿಸದಿದ್ದರೆ ಮಾತ್ರ. ಮುಂದೂಡಿದ ಬಟವಾಡೆ ಮಾರಾಟವೂ ಇದೇ ರೀತಿಯಲ್ಲಿ ಮುಂಚಿನ ಕರಾರಿನಂತೆ, ಮಾರುಕಟ್ಟೆಯಲ್ಲಿ ಸ್ಥಳದಲ್ಲಿಯೇ ಪಾವತಿಯ ವಿನಿಮಯದೊಂದಿಗೆ ಉತ್ಪನ್ನದ ಬಟವಾಡೆಯನ್ನು ಭವಿಷ್ಯದಲ್ಲಿ ಮಾಡಲಾಗುತ್ತದೆ.

●

R. N. 36702/83



PRINTED BY G. H. KRISHNAMURTHY, MYSORE PRINTING AND PUBLISHING HOUSE, ASHOKA ROAD, MYSORE-1